ಬೆಲೆ : ಎರಡು ಆಣೆ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೮-೦
೬ ತಿಂಗಳಿಗೆ ,, ೩-೮-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
DEC. 16
1946

ಸಂಪಾದಕರು : ಹ. ರಾ. ಪುರೋಹಿತ, ಎಂ. ಎ. ] ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ [ Editor H. R. Purohit, M. A.

ಸಂಪುಟ ೧೫ ] ಹುಬ್ಬಳ್ಳಿ ಸೋಮವಾರ ತಾರೀಖು ೧೬ — ೧೨ — ೧೯೪೬ [ ಸಂಚಿಕೆ ೩೪

# ‘ಈ ಸಮಿತಿ ಅಮರ ರಾಜ್ಯಘಟನೆ ರಚಿಸಲಿ’

## ಘಟನಾ ಸಮಿತಿಯ ತಾತ್ಪೂರ್ತಿಕ ಅಧ್ಯಕ್ಷರ ಪ್ರಾರಂಭ ಭಾಷಣ:

## ದಿಲ್ಲಿಯಲ್ಲಿ ಘಟನಾ ಸಮಿತಿಯ ಅಧಿವೇಶನದ ಆರಂಭ.

ಮುಸ್ಲಿಂ ಲೀಗ್ ಸದಸ್ಯರು ಸಮಿತಿಗೆ ಬಹಿಷ್ಕಾರ ಹಾಕಿದ್ದರಿಂದ ಅವರ ಹೊರತು ಉಳಿದ ಎಲ್ಲ ಸದಸ್ಯರು ಮಾತ್ರ ಸಭೆಗೆ ಹಾಜರಿದ್ದರು. ದಲಿತ ಮಹಾಮಂಡಲದ ಡಾ. ಅಂಬೇಡಕರರು "ನಿಷೇಧ ಪ್ರದರ್ಶನದೊಡನೆ" ಸಭೆಗೆ ಬಂದಿದ್ದರು. ಸದಸ್ಯರು ಅರ್ಧ ವರ್ತುಲಾಕಾರದಲ್ಲಿ ಕುಳಿತಿದ್ದರು.

ಮುಂದಿನ ಸಾಲಿನಲ್ಲಿ ಪಂ. ನೆಹರು, ಮೌ. ಆಝಾದ, ಸರದಾರ ಪಟೇಲ, ಆಚಾರ್ಯ ಕೃಪಲಾನಿ, ಡಾ. ರಾಜೇಂದ್ರ, ಶ್ರೀಮತಿ ಸರೋಜಿನಿ, ಡಾ. ಅಂಬೇಡಕರ, ಶ್ರೀ ಶರಚ್ಚಂದ್ರ, ರಾಜಾಜಿ, ಶ್ರೀ ಅಸಫಅಲ್ಲಿ ಇವರೇ ಮೊದಲಾದ ಪ್ರಮುಖರು ಕುಳಿತಿದ್ದರು.

ಪ್ರೇಕ್ಷಕರ ಗ್ಯಾಲರಿ ಕಿಕ್ಕಿರಿದು ತುಂಬಿತ್ತು. ಅಲ್ಲಿ ಬ್ರಿಟಿಶ ಹಾಯಕಮಿಶನರರಾದ ಟೆರೆನ್ಸ ಶೋನ, ಅಮೇರಿಕನ್ ರಾಯಭಾರಿ ಕಚೇರಿಯ ಜಾರ್ಜಮೆರೆಲ, ಸರ್ ಸಿ. ಪಿ. ರಾಮಸ್ವಾಮಿ ಅಯ್ಯರ್ ಮತ್ತು ಹಿಂದೀ ಸಂಸ್ಥಾನಗಳ ಅನೇಕ ಮಂತ್ರಿಗಳು ಕುಳಿತಿದ್ದರು.

ಕಾಂಗ್ರೆಸ್ ಅಧ್ಯಕ್ಷ ಕೃಪಲಾನಿಯವರು ಚುಟುಕಾದ ಹಿಂದುಸ್ತಾನಿ ಭಾಷಣದೊಂದಿಗೆ ಡಾ. ಸಿಂಹರನ್ನು ತಾತ್ಪೂರ್ತಿಕ ಅಧ್ಯಕ್ಷ ಸ್ಥಾನಕ್ಕೆ ಸೂಚಿಸಿ ಅವರ ರಾಷ್ಟ್ರಸೇವಾನಿರತ ಚರಿತ್ರವನ್ನು ಬಣ್ಣಿಸಿದರು. ಅಧ್ಯಕ್ಷರು ಪೀಠವನ್ನಲಂಕರಿಸಿದಾಗ ಎಲ್ಲ ಸದಸ್ಯರು ಎದ್ದು ನಿಂತರು.

### ಸಂದೇಶಗಳು

ಅಧ್ಯಕ್ಷರು ಅಮೇರಿಕಾ, ಚೀನ, ಅಸ್ಟ್ರೇಲಿಯಾ ಸರಕಾರಗಳಿಂದ ಘಟನಾ ಸಮಿತಿಗೆ ಬಂದ ಶುಭ ಸಂದೇಶಗಳನ್ನೋದಿದರು.

"...ನೀವು ಕೈಕೊಳ್ಳಲಿರುವ ಮಹತ್ಕಾರ್ಯಕ್ಕೆ ಯಶ ಸಿಗಲಿ. ಮಾನವ ಜನಾಂಗದ ಶಾಂತಿ, ಸಾಂಸ್ಕೃತಿಕ ಪ್ರಗತಿ, ಸ್ಥೈರ್ಯಗಳಿಗೆ ಹಿಂದು ಸ್ತಾನ ನೆರವಾಗಲರ್ಹವಾದ ರಾಜ್ಯ. ಜಗತ್ತಿನ ಎಲ್ಲ ಸ್ವಾತಂತ್ರ್ಯ ಪ್ರೇಮಿಗಳೂ ನಿಮ್ಮ ಸಭೆಯ ಕಾರ್ಯಕಲಾಪಗಳನ್ನು ಆತುರದಿಂದ ನಿರೀಕ್ಷಿಸುವರು" ಎಂದು ಅಮೇರಿಕನ್ ವಿದೇಶ ಖಾತೆಯ ಸಂದೇಶ ಹೇಳುತಿತ್ತು.

"...ಪ್ರಜಾಸತ್ತೆಯ ಹಾಗು ಹಿಂದುಸ್ತಾನದ ಪ್ರಗತಿಯ ಭದ್ರ ತಳಹದಿಯನ್ನು ಹಾಕುವ ಕಾರ್ಯದಲ್ಲಿ ನಿಮ್ಮ ಘಟನಾಸಮಿತಿ ಯಶಸ್ವಿಯಾಗಲಿ" ಎಂದು ಚೀನದ ವಿದೇಶ ಮಂತ್ರಿಯ ಸಂದೇಶದ ಹಾರೈಕೆಯಾಗಿತ್ತು.

ಅಸ್ಟ್ರೇಲಿಯಾದ ಸಂದೇಶದಲ್ಲಿ "ಭಾರತಕ್ಕೆ ಸ್ವತಂತ್ರ ರಾಷ್ಟ್ರಗಳ ಮಾಲಿಕೆಯಲ್ಲಿ ಸೇರುವ ಜನ್ಮಸಿದ್ಧ ಹಕ್ಕು ಪ್ರಾಪ್ತವಾಗಲು ಈ ವರೆಗೆ ನಡೆದ ಘಟನೆಗಳನ್ನು ಅಸ್ಟ್ರೇಲಿಯ ಅತ್ಯಂತ ಆಸ್ಥೆಯಿಂದ ನಿರೀಕ್ಷಿಸಿದೆ..."

ಆ ಮೇಲೆ ಅಧ್ಯಕ್ಷ ಭಾಷಣವಾಗಿ ಸದಸ್ಯರು ರಜಿಸ್ಟರದಲ್ಲಿ ಸಹಿ ಮಾಡುವದು ನಡೆಯಿತು.

ಸಂಕಲ್ಪಿಸಿದಂತೆ ಹಿಂದುಸ್ತಾನದ ಮೊದಲನೆ ಸ್ವತಂತ್ರ ಸಾರ್ವಭೌಮ ಘಟನಾ ಸಮಿತಿ ಡಿಸೆಂಬರ ೯ ಸೋಮವಾರ ಮುಂಜಾನೆ ೧೧ ಗಂಟೆಗೆ ದಿಲ್ಲಿಯಲ್ಲಿ ಪ್ರಾರಂಭವಾಯಿತು.

ವಯೋವೃದ್ಧರೂ ಘಟನಾ ಪಂಡಿತರೂ ಆದ ಡಾ. ಸಚ್ಚಿದಾನಂದ ಸಿಂಹ (ಬಿಹಾರ) ರು ಅಧಿವೇಶನದ ತಾತ್ಪೂರ್ತಿಕ ಅಧ್ಯಕ್ಷರಾಗಿದ್ದರು.

ಪ್ರಥಮ ದಿವಸದ ಕಾರ್ಯಕಲಾಪ ಅಧ್ಯಕ್ಷರ ಭಾಷಣ ಮತ್ತು ಸದಸ್ಯರ ಸಹಿ ಇವುಗಳಿಂದಲೇ ಮುಗಿಯಿತು.

### ಅಧ್ಯಕ್ಷರ ಭಾಷಣ

ಅಧ್ಯಕ್ಷರ ಮನನೀಯ ಭಾಷಣದ ಸಾರ ಇಂತಿತ್ತು:—

ಈ ಐತಿಹಾಸಿಕ ಹಾಗು ಸಂಸ್ಮರಣೀಯ ಪ್ರಸಂಗದಲ್ಲಿ ಘಟನಾ ಸಮಿತಿಯ ಕೆಲವು ಅಂಶಗಳ ವಿಷಯದಲ್ಲಿ ನನ್ನ ನಿರೀಕ್ಷಣೆಗೆ ಬಂದುದನ್ನು ನಾನು ಇಲ್ಲಿ ಹೇಳಿದರೆ ನೀವು ಸಹನೆಗೆಡುವದಿಲ್ಲೆಂದು ನಾನು ನಂಬಿದ್ದೇನೆ. ದೇಶಕ್ಕೆ ಘಟನೆಯನ್ನು ಯೋಜಿಸುವ ಈ ರಾಜಕೀಯ ಪದ್ಧತಿಯು ಬ್ರಿಟನದಲ್ಲಿಯ ನಮ್ಮ ಬಂಧುಗಳಿಗೆ ಗೊತ್ತಿರುವದಿಲ್ಲ. ಬ್ರಿಟಿಶ ಘಟನೆಯಲ್ಲಿ ಘಟನಾ ಸಮಿತಿ ಕಾಯದೆಯೆಂಬುದು ಇಲ್ಲದ್ದೇ ಇದಕ್ಕೆ ಕಾರಣವಾಗಿದೆ. ಕಾಯದೆ ಮಾಡುವದು ಹಾಗು ಅವುಗಳನ್ನು ರದ್ದುಪಡಿಸುವದು ಮೊದಲಾದ ಎಲ್ಲ ಅಧಿಕಾರವು ಅಲ್ಲಿ ಸಾರ್ವಭೌಮ ಸಂಸ್ಥೆಯಾದ ಬ್ರಿಟಿಶ ಪಾರ್ಲಿಮೆಂಟಕ್ಕೆ ಇರುವದು. ಅದ್ದರಿಂದ ನಾವು ಘಟನಾ ಸಮಿತಿಯ ಸರಿಯಾದ ಮಹತ್ವವನ್ನು ತಿಳಿದುಕೊಳ್ಳಬೇಕಾದರೆ ಬ್ರಿಟನವನ್ನು ಬಿಟ್ಟು ಉಳಿದ ದೇಶಗಳ ಕಡೆಗೆ ಹೊರಳಬೇಕಾಗುವದು. ಯುರೋಪದಲ್ಲಿ ಅತಿ ಪ್ರಾಚೀನ ಪ್ರಜಾಸತ್ತಾತ್ಮಕ ದೇಶವೆಂದರೆ ಸ್ವಿತ್ಸರ್ಲಂಡವಿರುವದು. ಸ್ವಿತ್ಸರ್ಲಂಡದ ಸದ್ಯದ ಘಟನಾತ್ಮಕ ಪದ್ಧತಿಯಲ್ಲಿ ಅನೇಕ ಮಹತ್ವದ ಹಾಗು ಬೋಧಕ ವೈಶಿಷ್ಟ್ಯಗಳಿವೆ. ಹಿಂದೀ ಘಟನಾ ರಚಕರಿಗೆ ಘಟನಾ ವಿಶಾರದರು ಅವುಗಳನ್ನು ಬಲವಾಗಿ ಅನುಮೋದಿಸಿದ್ದು ಈ ಸಮಿತಿಯು ಸ್ವಿಸ ಘಟನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸ್ವತಂತ್ರ ಹಿಂದುಸ್ತಾನಕ್ಕೆ ಯೋಗ್ಯ ಘಟನೆಯನ್ನು ತಯಾರಿಸುವಲ್ಲಿ ಅದರ ಉಪಯೋಗ ತೆಗೆದುಕೊಳ್ಳುವದೆಂದು ನಾನು ಆಶಿಸಿರುವೆನು.

ಯುರೋಪದಲ್ಲಿ ನಮಗೆ ಉಪಯೋಗ ಬೀಳತಕ್ಕ ಇನ್ನೊಂದು ಘಟನೆಯು ಫ್ರಾನ್ಸದ್ದಿರುವದು. ಫ್ರೆಂಚ ರಾಜಸತ್ತೆ ಬುಡಮೇಲಾದ ಮೇಲೆ ೧೭೮೯ ರಲ್ಲಿ ಫ್ರೆಂಚ ರಾಷ್ಟ್ರೀಯ ಸಮಿತಿ ಎಂಬ ಮೊದಲನೆ ಘಟನಾ ಸಮಿತಿ ಅಲ್ಲಿ ಕೂಡಿಸಲ್ಪಟ್ಟಿತು.

### ಅಮೇರಿಕೆಯ ಘಟನೆ

ಆದರೆ ೧೭೮೯ರಲ್ಲಿ ಮೊದಲನೆ ಘಟನಾ ಸಮಿತಿಯಲ್ಲಿ ಸೇರಿದ ಫ್ರೆಂಚ ಘಟನಾ ರಚಕರೂ ೧೭೮೭ ರಲ್ಲಿ ಫಿಲಾಡೆಲ್ಫಿಯಾದಲ್ಲಿ ಕೂಡಿದ ಅಮೇರಿಕನ್ ಘಟನಾ ಸಭೆಯಲ್ಲಾದ ಕಾರ್ಯದಿಂದ ಹೆಚ್ಚಿನ ಪಾಠ ತೆಗೆದುಕೊಂಡರು. ಅವರು ಬ್ರಿಟಿಶ ರಾಜರಲ್ಲಿಯ ನಿಷ್ಠೆಯನ್ನು ಕಿತ್ತೊಗೆದು ಒಂದೆಡೆ ಕೂಡಿ ಜಗತ್ತಿನಲ್ಲಿಯೆ ಭದ್ರವಾದ ವ್ಯವಹಾರ್ಯವಾದ ಹಾಗು ಕಾರ್ಯಕ್ಷಮ ಪ್ರಜಾಸತ್ತಾತ್ಮಕ ಘಟನೆ ಸಿದ್ಧಪಡಿಸಿದ್ದರು. ಹಿಂದುಗಡೆ ಫ್ರಾನ್ಸದ ಘಟನೆಗೂ ಈ ಘಟನೆಯನ್ನು ಮಾದರಿಯಾಗಿ ತೆಗೆದುಕೊಳ್ಳಲಾಯಿತಲ್ಲದೆ ಬ್ರಿಟಿಶ ಕಾಮನ್‌ವೆಲ್ಥದ ಕಾನಡಾ ಅಸ್ಟ್ರೇಲಿಯಾ ಹಾಗು ದಕ್ಷಿಣ ಆಫ್ರಿಕಾ ಈ ಸ್ವತಂತ್ರ ವಸಾಹತುಗಳ ಘಟನೆಗಳಿಗೂ ಅದನ್ನು ಅನುಸರಿಸಲಾಯಿತು. ನೀವಾದರೂ ಅಮೇರಿಕನ್ ಘಟನೆಯ ಕಡೆಗೆ ಹೆಚ್ಚು ಲಕ್ಷಕೊಡುವಿರೆಂದು ನಾನು ಆಶಿಸಿದ್ದೇನೆ.

ಬ್ರಿಟಿಶ ಕಾಮನ್‌ವೆಲ್ಥದಲ್ಲಿ ಅಮೇರಿಕನ್ ಪದ್ಧತಿಯಿಂದ ಮೊದಲು ಕ್ಯಾನಡಾ ಲಾಭ ಪಡೆಯಿತು. ೧೮೬೪ ರಲ್ಲಿ ಕ್ವಿಬೆಕದ ಘಟನಾ ಪರಿಷತ್ತು ಸೇರಿ ಕ್ಯಾನೇಡಿಯನ್ ಘಟನೆ ತಿದ್ದುಪಡಿಸಿತು. ೧೮೬೭ ರಲ್ಲಿ ಬ್ರಿಟಿಶ ಪಾರ್ಲಮೆಂಟದಿಂದ ಅದಕ್ಕೆ ಮನ್ನಣೆ ದೊರೆಯಿತು. ಬ್ರಿಟಿಶ ನಾರ್ಥ ಅಮೇರಿಕನ್ ಕಾಯದೆಯೆಂದು ಅದು ಕಾಯದೆ ಪುಸ್ತಕದಲ್ಲಿ ಇನ್ನೂ ಇದೆ. ಬ್ರಿಟಿಶ ಪಾರ್ಲಿಮೆಂಟನಲ್ಲಿ ಕ್ಯಾನೇಡಿಯನ್ ಘಟನಾ ಯೋಜನೆಯು ಒಂದೇ ಒಂದು ಬರೆವಣಿಗೆ ತಿದ್ದುಪಡಿಯಿಂದ ಸಂಪೂರ್ಣ ಮಾನ್ಯವಾಯಿತು. ನಿಮಗಾದರೂ ಇದೇ ರೀತಿ ಯಶಸ್ಸು ಸಿಗುವದೆಂದು ಆಶೆಯಿದೆ.

ಅಸ್ಟ್ರೇಲಿಯಾ ಹಾಗು ದಕ್ಷಿಣ ಆಫ್ರಿಕೆಗಳ ಘಟನೆಗಳನ್ನು ಸಿದ್ಧಪಡಿಸುವಲ್ಲೂ ಅಮೇರಿಕನ್ ಘಟನಾ ಪದ್ಧತಿಯ ಉಪಯೋಗ ಮಾಡಿಕೊಳ್ಳಲಾಯಿತು. ಹೀಗೆ ಅಮೇರಿಕನ್ ಸಮಿತಿಯ ಘಟನೆಯನ್ನು ಬೇರೆ ಬೇರೆ ರಾಷ್ಟ್ರಗಳಿಗೆ ಸ್ವತಂತ್ರ ಸಂಯುಕ್ತ ಘಟನೆ ಸಿದ್ಧಪಡಿಸುವಲ್ಲಿ ಜಗತ್ತೇ ಮಾದರಿಯಾಗಿ ಸ್ವೀಕರಿಸಿದ್ದರಿಂದ ಅಮೇರಿಕನ್ ಪದ್ಧತಿ ಕಡೆಗೆ ನಾನು ನಿಮ್ಮ ಲಕ್ಷ ಎಳೆದಿರುವೆನು. ಅದನ್ನು ಇಡಿಯಾಗಿ ಸ್ವೀಕರಿಸಬೇಕೆಂದು ನಾನು ಹೇಳುವದಿಲ್ಲ. ಆದರೆ ನಿಮ್ಮ ದೇಶದ ಅವಶ್ಯಕತೆಗನುಗುಣವಾಗಿ ಆ ಕಲವುಗಳ ಉಪಯೋಗ ತೆಗೆದುಕೊಳ್ಳಬೇಕು. ನಮ್ಮಲ್ಲಿಯ ಸಾಮಾಜಿಕ, ಆರ್ಥಿಕ ಹಾಗು ರಾಜಕೀಯ ಪರಿಸ್ಥಿತಿಗನುಗುಣವಾಗಿ ಅವುಗಳಲ್ಲಿ ಹೆಚ್ಚು ಕಡಿಮೆ ಮಾಡಿಕೊಳ್ಳಬೇಕು. ಘಟನಾ ವಿಷಯದಲ್ಲಿ ಪ್ರಮಾಣಭೂತರಾದ ಮನ್ರೊ ಅವರು ಅಮೇರಿಕನ್ ಘಟನೆಯು ಅನೇಕ ಕರಾರು ಹಾಗು ಒಡಂಬಡಿಕೆಗಳಿಂದ ಕೂಡಿರುವದೆಂದು ಹೇಳಿರುವರು. ಅದೇ ತರದ ಸಮಂಜಸ ಕರಾರು ಹಾಗು ನ್ಯಾಯ್ಯವಾದ ಒಡಂಬಡಿಕೆಗಳು ಹಿಂದುಸ್ತಾನದ ಘಟನೆ ರಚಿಸುವಲ್ಲೂ ಅವಶ್ಯವಿರುವವು.

### ಸಮಂಜಸ ಒಡಂಬಡಿಕೆಗಳು

ವ್ಹಾಯಕಾಂಟ ಬ್ರೈಸರೆಂಬ ಆಂಗ್ಲ ಮುತ್ಸದ್ದಿಯು "ಅಮೇರಿಕೆಯ ಕಾಮನ್‌ವೆಲ್ಥ" ಎಂಬ ಗ್ರಂಥದಲ್ಲಿ ಈ ವಿಷಯವಾಗಿ ಬರೆದಿರುವ ಮಾತುಗಳನ್ನು ಎತ್ತಿ ತೋರಿಸುವದು ಅಪ್ರಸ್ತುತವಾಗಲಾರದು. ಅವರು ಹೀಗೆ ಬರೆದಿರುವರು:— "ಅಮೇರಿಕೆಯ ಕೇಂದ್ರ ಅಥವಾ ರಾಷ್ಟ್ರೀಯ ಸರಕಾರವು ಬರಿ ಒಂದು ಸಂಘವಲ್ಲ. ಏಕೆಂದರೆ ಸಂಸ್ಥಾನಗಳೆಂದು ಕರೆವ ಘಟಕಾವಯವಗಳಾದ ಗುಂಪುಗಳನ್ನೇ ಅದು ಪೂರ್ಣ ಅವಲಂಬಿಸಿಲ್ಲ. ಅದು ಸ್ವತಃ ಒಂದು ಕಾಮನ್‌ವೆಲ್ಥವೇ ಆಗಿದೆಯಲ್ಲದೆ ಕಾಮನ್‌ವೆಲ್ಥಗಳ ಒಂದು ಒಕ್ಕೂಟವೂ ಆಗಿದೆ. ಯಾಕೆಂದರೆ ಪ್ರತಿಯೊಬ್ಬ ನಾಗರಿಕನು ಪ್ರತ್ಯಕ್ಷವಾಗಿ ಅದಕ್ಕೆ ವಿಧೇಯನಾಗಿರುವನು. ಹಾಗೂ ತನ್ನ ಕೋರ್ಟುಗಳ ಮತ್ತು ಆಡಳಿತದ ಅಧಿಕಾರಿಗಳ ಮುಖಾಂತರ ಅದು ಅವನ ಮೇಲೆ ತನ್ನ ಪ್ರಭುತ್ವವನ್ನು ನಡೆಸುತ್ತದೆ. ಇದಕ್ಕೆ ಪ್ರತಿಯಾಗಿ ಸಂಸ್ಥಾನಗಳಾದರೂ ಒಕ್ಕೂಟದ ಕೇವಲ ಒಳ ವಿಭಾಗಗಳಾಗಿಲ್ಲ; ಅರ್ಥಾತ್ ರಾಷ್ಟ್ರೀಯ (ಕೇಂದ್ರ) ಸರಕಾರದ ಕೇವಲ ಮರಿಗಳಲ್ಲ. ತಮ್ಮ ನಾಗರಿಕರ ಮೇಲೆ ಅವುಗಳದೇ ಆದ ಒಂದು ಸ್ವಂತ ಅಧಿಕಾರವಿದೆ: ಈ ಅಧಿಕಾರವು ಕೇಂದ್ರ ಸರಕಾರದಿಂದ ಬಂದ ದತ್ತಾಧಿಕಾರವಲ್ಲ. ಅಮೇರಿಕೆಯ ರಾಜ್ಯಘಟನೆಯಲ್ಲಡಕವಾದ ಗುಣಾಂಶಗಳನ್ನು ಕುರಿತು ಬ್ರಿಟಿಶ ಗ್ರಂಥಕಾರನ ಅಭಿಪ್ರಾಯಗಳನ್ನು ಉದ್ಧರಿಸಿದ್ದುದನ್ನು ಕೇಳಿದ ನಂತರ ಸ್ಟೋರಿ ಎಂಬ ಪ್ರಖ್ಯಾತ ಅಮೇರಿಕನ್ ನ್ಯಾಯಶಾಸ್ತ್ರಪಂಡಿತನ ಸುದೀರ್ಘವಾದ ಅಭಿಪ್ರಾಯವನ್ನು ಚಿತ್ತವಿಟ್ಟು ಲಾಲಿಸುವಿರೆಂದು ಆಶಿಸಿದ್ದೇನೆ.

### ಅಮರ ಘಟನೆ

"ತಮ್ಮ ಪೂರ್ವಜರ ರಕ್ತ, ಶ್ರಮ, ಯಾತನೆಗಳಿಂದ ಗಳಿಸಿದ ಮತ್ತು ಬುದ್ಧಿಮಂತಿಕೆಯಿಂದ ತಿದ್ದಿಕೊಂಡು ಶ್ರದ್ಧೆಯಿಂದ ರಕ್ಷಿಸಿಕೊಂಡು ಬಂದ ಮುಂದಿನ ಪೀಳಿಗೆಗಳಿಗೆಲ್ಲ ಧರ್ಮ, ಆಸ್ತಿ, ಸ್ವಾತಂತ್ರ್ಯಗಳ ಶಾಂತ ಉಪಭೋಗವೇ ಮೊದಲಾದ ಜೀವನದ ಸಮಸ್ತ ವರಗಳನ್ನು ದಯಪಾಲಿಸಬಲ್ಲ ಉದಾತ್ತ ದಾಯಭಾಗವು ತಮ್ಮ ಬಳಿಯಲ್ಲಿದೆಯೆಂಬುದನ್ನು ಅಮೇರಿಕೆಯ ತರುಣನಾವನೂ ಮರೆಯದಿರಲಿ. ಅತ್ಯಂತ ಚತುರರೂ, ಶ್ರದ್ಧಾವಂತರೂ ಆದ ಶಿಲ್ಪಿಗಳು ಈ ಕಟ್ಟಡವನ್ನು ಕಟ್ಟಿರುವರು; ಅದರ ತಳಹದಿ ಭದ್ರವಾಗಿದೆ. ಅದು ಅಜಿಂಕ್ಯವಾಗಿದೆ. ಮಾನವ ಕಾರ್ಯವು ಅಮರತ್ವದ ಹಕ್ಕಿಗೆ ಆಶೆಪಡಬಹುದಾದರೆ ಅಮರತ್ವಕ್ಕಾಗಿಯೇ ಅದು ರಕ್ಷಿಸಲ್ಪಟ್ಟಿದೆ. ಆದರೂ ಅದರ ರಕ್ಷಕರೇ ಆದ ಜನರ ಉದಾಸೀನತೆ, ನೀತಿಭ್ರಷ್ಟತೆ, ಅಥವಾ ಮೂರ್ಖತನದಿಂದ ಕ್ಷಣಾರ್ಧದಲ್ಲಿ ಅದು ನಾಶವಾಗಬಹುದು. ನಾಗರಿಕರ ಬುದ್ಧಿಮತ್ತೆ, ಸದ್ಗುಣ, ಜನಸೇವಾಬುದ್ಧಿಗಳಿಂದಲೆ ಪ್ರಜಾರಾಜ್ಯಗಳ ಸೃಷ್ಟಿಯಾಗುತ್ತದೆ.

"ಪ್ರಾಮಾಣಿಕತೆಯ ಧೈರ್ಯವನ್ನು ತೋರಿಸಿದರೆಂಬ ಕಾರಣದಿಂದ ಬುದ್ಧಿವಂತರನ್ನೆಲ್ಲ ಸಾರ್ವಜನಿಕ ಓಲಗಶಾಲೆಗಳಿಂದ ಹೊರದಬ್ಬಿ

( ೧೬ ನೇ ಪುಟಕ್ಕೆ )




## ರಷ್ಯದ ಯೋಜನೆ --- ಸಾಧನೆ.

ಶ್ರೀ ವ್ಹಿ. ಎಸ್. ನಾರಾಯಣರಾವ ವಿಚಾರ ಸಾಹಿತ್ಯ ಲಿಮಿಟೆಡ್ ಬೆಂಗಳೂರು ಸಿಟಿ, ಕ್ರೌನ ಅಷ್ಟಪತ್ರದ ೧೨೪ ಪುಟಗಳು ಬೆಲೆ ೧—೨—೦.

ರಶಿಯಾ ಜಗತ್ತಿನ ಪ್ರಮುಖ ರಾಷ್ಟ್ರಗಳಲ್ಲಿ ಒಂದಾಗಿದೆ. ಜಗತ್ತಿಗೇ ಒಂದು ಹೊಸ ದಾರಿಯನ್ನು ಕಮ್ಯುನಿಜಂದ ದ್ವಾರಾ ತೋರಿಸಿಕೊಡಲು ಪ್ರಯತ್ನಿಸುತಿದೆ. ಎಷ್ಟರಮಟ್ಟಿಗೆ ಅದರಲ್ಲಿ ರಶಿಯಾ ಯಶಸ್ವಿಯಾಗಿದೆಂಬುದು ಹೇಳಲಿಕ್ಕೆ ಬಾರದಿದ್ದರೂ ಅನೇಕ ರಾಷ್ಟ್ರಗಳು ರಶಿಯದ ತತ್ವಗಳಿಂದ ಆಕರ್ಷಿತವಾಗಿವೆ ಆಗಹತ್ತಿವೆ. ಮಹಾಯುದ್ಧದಲ್ಲಿ ರಶಿಯಾ ವಹಿಸಿದ ಪಾತ್ರ ಅದರ ತತ್ವಕ್ಕೆ ವಿರೋಧಕವಾಗಿತ್ತೆಂದು ಟೀಕಿಸುವವರೂ ಅನೇಕ ಜನರಿರುವರು. ಅದೇನೇ ಇದ್ದರೂ ಝಾರರಿಂದ ಸ್ವತಂತ್ರವಾಗಿ ತನ್ನದೊಂದು ವಿಶಿಷ್ಟ ಯೋಜನೆಯನ್ನು ಇಟ್ಟುಕೊಂಡು ಅದನ್ನು ಕಾರ್ಯಕಾರಿ ಮಾಡಲು ಪ್ರಯತ್ನಿಸುತಿದೆ ರಶಿಯಾ. ಶ್ರೀ ನಾರಾಯಣರಾಯರು ಆ ಮಹಾರಾಷ್ಟ್ರದ ಯೋಜನೆ ಮತ್ತು ಸಾಧನೆಯ ವಿಚಾರವನ್ನು ಈ ಪುಸ್ತಕದಲ್ಲಿ ಸಂಕ್ಷೇಪತಃ ಮಾಡಿದ್ದಾರೆ. 'ರಶಿಯದ ತತ್ವ ಕಾರ್ಯಪದ್ಧತಿಯನ್ನು ತಿಳಿದುಕೊಳ್ಳಲು ಇತ್ತೀಚೆ ಜನ ಹೆಚ್ಚು ಕುತೂಹಲಿಗಳಾಗಿದ್ದಾರೆ. ಈ ಸಮಯದಲ್ಲಿ ಶ್ರೀ ನಾರಾಯಣರಾಯರು ತಮ್ಮ ಪುಸ್ತಕದ ಎರಡನೆ ಆವೃತ್ತಿಯನ್ನು ಹೊರಡಿಸಿದ್ದು ಉಚಿತವಾಗಿದೆ. ನಾರಾಯಣರಾಯರ ಈ ಪ್ರಯತ್ನದ ಲಾಭವನ್ನು ಕನ್ನಡಿಗರು ಪಡೆದು ಅವರನ್ನು ಪ್ರೋತ್ಸಾಹಿಸಬೇಕೆಂದು ಬಿನ್ನವಿಸುತ್ತೇವೆ. ವಿಚಾರ ಸಾಹಿತ್ಯದವರು ಇಂಥ ಉಪಯುಕ್ತ ಪುಸ್ತಕಗಳನ್ನು ಪ್ರಕಟಿಸುತಿರುವದು ಅಭಿನಂದನೀಯ.

## ಕಾನೂರು ಸುಬ್ಬಮ್ಮ ಹೆಗ್ಗಡಿತಿ

ಲೇ:— ಕುವೆಂಪು, ಕಾವ್ಯಾಲಯ ಮೈಸೂರು. ಕ್ರೌನ ಅಷ್ಟಪತ್ರದ ೬೪೦ ಪುಟಗಳು ಬೆಲೆ ೮-೮-೦. ಕನ್ನಡ ಸಾಹಿತಿಗಳಲ್ಲಿ ಉನ್ನತಸ್ಥಾನವನ್ನು ಸಂಪಾದಿಸಿದ ಶ್ರೀ ಕೆ. ವಿ. ಪುಟ್ಟಪ್ಪನವರು ಬರೆದ ಈ ಮಹಾಕಾದಂಬರಿಯ ದ್ವಿತೀಯ ಆವೃತ್ತಿಯನ್ನು ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ.

ಈ ಕಾದಂಬರಿಯಲ್ಲಿ ಮಲೆನಾಡಿನ ಜೀವನವು ಓತಪ್ರೋತವಾಗಿ ವರ್ಣಿಸಲ್ಪಟ್ಟಿದೆ. ಮಲೆನಾಡನ್ನು ಕಾಣದವರಿಗೂ ಇದನ್ನು ಓದಿದರೆ ಅಲ್ಲಿನ ಜೀವನದ ಅನುಭವ ಬರುವದು ಈ ಪುಸ್ತಕದ ಮುದ್ರಣ ಮತ್ತು ನೋಟ್ಬೊಡಿಕೆ ಮನೋಹರವಾಗಿವೆ. ಕನ್ನಡಿಗರು ಎರಡನೆಯ ಆವೃತ್ತಿಯ ಈ ಪುಸ್ತಕವನ್ನು ತರಿಸಿಕೊಂಡು ಪುಟ್ಟಪ್ಪನವರ ರಸದೂಟವನ್ನು ಸವಿಯಬೇಕೆಂದು ಬಿನ್ನವಿಸುತ್ತೇವೆ.

## ಮಲೆನಾಡಿನ ಚಿತ್ರಗಳು

ಲೇ:- ಕುವೆಂಪು. ಪ್ರಕಾಶಕರು ಕಾವ್ಯಾಲಯ ಮೈಸೂರು. ಕ್ರೌನ ಅಷ್ಟಪತ್ರದ ೧೨೪ ಪುಟಗಳು, ಮೂರನೆಯ ಮುದ್ರಣ, ಈ ಪುಸ್ತಕ ಎರಡೇ ವರ್ಷಗಳಲ್ಲಿ ಪುನರ್ಮುದ್ರಣವನ್ನು ಹೊಂದಿದೆಂದ ಬಳಿಕ ಇದರ ಲೋಕಪ್ರಿಯತೆಯ ಬಗ್ಗೆ ಹೆಚ್ಚಿಗೆ ಬರೆಯಬೇಕಿಲ್ಲ. ಹೆಸರಿಗೆ ತಕ್ಕಂತೆ ಈ ಪುಸ್ತಕದಲ್ಲಿ ಮಲೆನಾಡಿನ ಚಿತ್ರಗಳು ಹೃದಯಂಗಮವಾಗಿ ಚಿತ್ರಿಸಲ್ಪಟ್ಟಿವೆ. ಕವಿಯ ಕಲಾಮಯ ಕೈ ಇದರಲ್ಲಿ ಒಳ್ಳೆ ಯಶಸ್ವಿಯಾಗಿದೆ. ಕನ್ನಡಿಗರು ಇದರ ಸವಿಯನ್ನು ಸವಿಯಬೇಕು.

## ಮೂರು ನಾಟಕಗಳು

ಲೇ— ಕುವೆಂಪು ಪ್ರಕಾಶಕರು ಕಾವ್ಯಾಲಯ ಮೈಸೂರು ಕ್ರೌನ ಅಷ್ಟಪತ್ರದ ೧೨೪ ಪುಟಗಳು. ಬೆಲೆ ೧—೨—೦

ಶ್ರೀ ಪುಟ್ಟಪ್ಪನವರು ಬರೆದ ಮಹಾರಾತ್ರಿ, ಸ್ಮಶಾನ ಕುರುಕ್ಷೇತ್ರಂ, ಜಲಗಾರ ಈ ಮೂರು ನಾಟಕಗಳ ನಾಲ್ಕನೆಯ ಮುದ್ರಣ. ಈ ನಾಟಕಗಳು ಮೂರು ಆವೃತ್ತಿ ಈಗಾಗಲೆ ಮುಗಿದು ಹೋಗಿವೆಂದ ಬಳಿಕ ಇವುಗಳ ಲೋಕಪ್ರಿಯತೆಯ ಬಗ್ಗೆ ಬೇರೆ ಬರೆಯಲಿಕ್ಕೆ ಬೇಡ. ಕಾವ್ಯ, ನಾಟಕ, ಕಾದಂಬರಿ, ಬರೆಯುವಲ್ಲಿ ನುರಿತವರಾದ ಶ್ರೀ ಪುಟ್ಟಪ್ಪನವರು ತಮ್ಮ ಅನುಭವ ಮತ್ತು ಕಲೆಯ ಪರಿಚಯವನ್ನು ಕನ್ನಡಿಗರಿಗೆ ಇದರಂತೆಯೆ ಮಾಡಿಕೊಡಲೆಂದು ಹಾರಯಿಸುತ್ತೇವೆ. ಶ್ರೀ ಪುಟ್ಟಪ್ಪನವರ ಕೃತಿಗಳನ್ನೆಲ್ಲ ಮುದ್ದಾಗಿ ಮುದ್ರಿಸಿ ಪ್ರಕಟಿಸುವ ಹೊಣೆಹೊತ್ತ ಮೈಸೂರು ಕಾವ್ಯಾಲಯದವರು ಅಭಿನಂದನೆಗೆ ಪಾತ್ರರಿರುವರು.

## ಸರೋಜಿನಿ ನಾಯ್ಡು

ಲೇ— ನಾಡಿಗ ಕೃಷ್ಣಮೂರ್ತಿ. ಶ್ವೇತ ಕುಸುಮ ಸಾಹಿತ್ಯ ಮಾಲೆ ಮೈಸೂರು ಫುಲಸ್ಕ್ಯಾಪ ಅಷ್ಟ ಪತ್ರದ ೪೦ ಪುಟಗಳು. ಬೆಲೆ ಎಂಟಾಣೆ.

ಹಿಂದುಸ್ಥಾನದ ಸ್ವಾತಂತ್ರ್ಯ ಸಮರದಲ್ಲಿ ಪ್ರಮುಖ ಪಾತ್ರ ವಹಿಸಿದ ಮಹಿಳೆಯರಲ್ಲಿ ಅಗ್ರಸ್ಥಾನದಲ್ಲಿರುವ ಶ್ರೀಮತಿ ಸರೋಜಿನಿ ನಾಯ್ಡುರವರ ಚರಿತ್ರೆಯನ್ನು ಶ್ರೀ ನಾಡಿಗರು ಸಂಕ್ಷಿಪ್ತವಾಗಿ ಇದರಲ್ಲಿ ಬರೆದಿದ್ದಾರೆ, ಮುಪ್ಪಿನವರಾಗಿದ್ದರೂ ಸರೋಜಿನಿಯವರು ನಾಡಸೇವೆಯನ್ನು ಈಗಲೂ ಮಾಡುತಿರುವರು. ಸರೋಜಿನಿಯವರ ಆದರ್ಶ ಜೀವನವನ್ನು ಸ್ವಲ್ಪದರಲ್ಲಿಯೆ ಕನ್ನಡತಿಯರಿಗೆ ತಿಳಿಸಿಕೊಟ್ಟದ್ದಕ್ಕೆ ಶ್ರೀ ನಾಡಿಗರು ಅಭಿನಂದನಾರ್ಹರು.

## ಕಮಲಾ ನೆಹರು

ಲೇ— ನಾಕಮೂ ಶ್ವೇತ ಕುಸುಮ ಸಾಹಿತ್ಯ ಮೈಸೂರು ಫುಲಸ್ಕ್ಯಾಪ ಅಷ್ಟ ಪತ್ರದ ೪೮ ಪುಟಗಳು. ಬೆಲೆ ಎಂಟಾಣೆ—

ಪಂಡಿತ ಜವಾಹರಲಾಲರ ವೀರಪತ್ನಿ ಕಮಲಾ ನೆಹರು ಇವರ ಜೀವನ ಚರಿತ್ರೆಯನ್ನು ಸಂಕ್ಷೇಪತಃ ಈ ಪುಟ್ಟ ಪುಸ್ತಕದಲ್ಲಿ ಕೊಡಲಾಗಿದೆ. ನೆಹರು ಮನೆತನದವರು ರಾಷ್ಟ್ರಕಾರ್ಯದಲ್ಲಿ ಸರಸ್ವವನ್ನು ತ್ಯಜಿಸಿದವರೆಂಬುದನ್ನು ಬೇರೆ ಹೇಳಬೇಕಿಲ್ಲ. ಶ್ರೀ ಕಮಲಾ ಅದಕ್ಕೆ ಅಪವಾದವಾಗಿರಲಿಲ್ಲ. ತನ್ನ ಆರೋಗ್ಯ ಮೊದಲಿನಿಂದಲೂ ಅಷ್ಟೊಂದು ಅನುಕೂಲವಿರದಿದ್ದರೂ ಪತಿರಾಜ ಕೈಕೊಂಡ ರಾಷ್ಟ್ರಸೇವೆಯಲ್ಲಿ ತುಂಬ ಸಹಾಯಕಳಾಗಿದ್ದಳು. ಸ್ವತಃ ರಾಷ್ಟ್ರಸೇವೆ ಮಾಡಿ ಭಾರತದ ನಾರಿಯರಿಗೆ ಆದರ್ಶಳಾಗಿದ್ದಳು. ಆತ್ಮಚರಿತ್ರೆಯಲ್ಲಿ ಜವಾಹರಲಾಲರು ತಮ್ಮ ಪತ್ನಿಯ ಬಗ್ಗೆ ತೆಗೆದ ಉದ್ಗಾರಗಳನ್ನು ನೋಡಿದರೆ ಅವರ ನಿಜ ಯೋಗ್ಯತೆ ಗೊತ್ತಾಗುವುದು. ಶ್ರೀ ನಾಡಿಗರು ಈ ಚಿಕ್ಕ ಪುಸ್ತಕದಲ್ಲಿ ಅದನ್ನೆಲ್ಲ ಚೆನ್ನಾಗಿ ಬಣ್ಣಿಸಿದ್ದಾರೆ. ಕಮಲಾ ಇಷ್ಟೊಂದು ಆದರ್ಶ ಸತಿ ಮತ್ತು ರಾಷ್ಟ್ರಸೇವಕಳಿದ್ದುದರಿಂದಲೆ ಇಂದಿಗೂ ಅವಳ ಸ್ಮಾರಕ ಆಸ್ಪತ್ರೆಯ ರೂಪದಲ್ಲಿ ಕಂಗೊಳಿಸುತ್ತದೆ. ಕನ್ನಡದಲ್ಲಿ ರಾಷ್ಟ್ರಧುರೀಣರ ಚರಿತ್ರೆಯು ಕೊರತೆಯಿರುವಾಗ ಶ್ರೀ ನಾಡಿಗರು ಇದನ್ನು ಬರೆದು ಉಪಕಾರ ಮಾಡಿದ್ದಾರೆ. ಕನ್ನಡಿಗರು ಅವರಿಗೆ ತಕ್ಕ ಪ್ರೋತ್ಸಾಹ ಕೊಟ್ಟು ಇನ್ನೂ ಇಂಥ ಉಪಯುಕ್ತ ಪುಸ್ತಕ ಬರೆಯಲು ಅವರಿಗೆ ಅನುಕೂಲತೆಯನ್ನು ಕಲ್ಪಿಸಿಕೊಡಬೇಕೆಂದು ಸೂಚಿಸಬಯಸುತ್ತೇವೆ.

## ಸ್ತ್ರೀಯರ ಸಮಸ್ಯೆಗಳು

ಗಾಂಧೀಜಿಯವರು ಬರೆದ To the Women ಪುಸ್ತಕದ ಕನ್ನಡ ಅನುವಾದ. ಅನುವಾದಕರು ಶ್ರೀ ಪ್ರಲ್ಹಾದ ನರೇಗಲ್ಲ ಎಂ. ಎ. ಬಿ. ಟಿ. ಶ್ರೀ ವೆಂಕಟೇಶ ಮಳಿಯೆ. ಪ್ರಕಾಶಕರು ಪಾಂಡೇಶ್ವರ ಸುಬ್ಬರಾಯರು ಪಾರ್ಕವ್ಯೂ ಬೆಂಗಳೂರ ನಗರ. ಮಾರಾಟಗಾರರು ಸಾಹಿತ್ಯ ಭಾಂಡಾರ ಹುಬ್ಬಳ್ಳಿ. ಕ್ರೌನಅಷ್ಟಪತ್ರದ ೧೧೬ ಪುಟಗಳು. ಬೆಲೆ ೧—೪—೦

ಮಹಾತ್ಮಾ ಗಾಂಧಿಯವರು ಸ್ತ್ರೀಯರ ಸಮಸ್ಯೆಗಳನ್ನು ಕುರಿತು ಕಾಲಕಾಲಕ್ಕೆ ಮಾಡಿದ ಭಾಷಣ ಬರೆದ ಬರೆಹಗಳನ್ನು ಸಿಂಧದ ಶ್ರೀ ಆನಂದ ಟ. ಹಿಂಗೋರಾಣಿಯವರು ಏಕತ್ರ ಸಂಗ್ರಹಿಸಿ ೧೯೪೧ ರಲ್ಲಿ ಪ್ರಸಿದ್ಧಿಸಿದ ಪುಸ್ತಕದಲ್ಲಿಯ ೨೫ ಬರೆಹಗಳನ್ನು ಮಾತ್ರ ಕನ್ನಡಿಸಿ ಈ ಪುಸ್ತಕವನ್ನು ಪ್ರಸಿದ್ಧಿಸಲಾಗಿದೆ. ಗಾಂಧೀಜಿಯವರು ನಮ್ಮ ಹೆಣ್ಣುಮಕ್ಕಳಿಗೆ ಸಮಾಜದಲ್ಲಿ ಯಾವ ಬಗೆಯ ಉಚ್ಚ ಸ್ಥಾನವನ್ನು ಕೊಡುತ್ತಾರೆಂಬುದು ಸರ್ವಶ್ರುತ. ನಾರಿಯರು ಆದರ್ಶ ಸತೀಮಣಿಗಳಾಗಿ ತಾಯ್ತನದ ಮತ್ತು ರಾಷ್ಟ್ರದ ಕಾರ್ಯವನ್ನು ಎಂತು ಮಾಡಬಲ್ಲರೆಂಬುದನ್ನು ಗಾಂಧೀಜಿಯವರು ತಮ್ಮ ಬರೆಹಗಳಲ್ಲಿ ಮುಂದಟ್ಟಾಗುವಂತೆ ಬರೆದಿದ್ದಾರೆ. ಕನ್ನಡತಿಯರು ಆ ವಿಚಾರಗಳನ್ನು ತಿಳಿದುಕೊಳ್ಳುದಕ್ಕೆ ಈ ಪುಸ್ತಕ ಒಳ್ಳೆ ಸಹಾಯಕವಾಗುವುದೆಂದು ಆಶಿಸುತ್ತೇವೆ. ಇಂಥ ಉಪಯುಕ್ತ ಪುಸ್ತಕವನ್ನು ಹಂಡಬಂಡ ಕಾಗದಗಳಲ್ಲಿ ಮುದ್ರಿಸದೆ ಒಳ್ಳೆ ಕಾಗದದ ಮೇಲೆ ಮುದ್ರಿಸುವದವಶ್ಯವಾಗಿತ್ತೆಂದು ಹೇಳಬಹುದು. ಕನ್ನಡತಿಯರು ಇದರ ಪ್ರಯೋಜನ ಪಡೆಯಬೇಕಾಗಿ ಹಾರೈಕೆ.

## ಪುಸ್ತಕ ಪ್ರಪಂಚ

ಪ್ರಧಾನ ಸಂಪಾದಕರು ಶ್ರೀ ಜಿ. ಹನುಮಂತರಾವ ಎಂ. ಎ. ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ ಮೈಸೂರು.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಇದೊಂದು ಹೊಸ ಬಗೆಯ ಸಾಹಿತ್ಯ. ಬೇರೆ ಬೇರೆ ಭಾಷೆಗಳಲ್ಲಿ ಪ್ರಸಿದ್ಧವಾದ ಪುಸ್ತಕಗಳಲ್ಲಿಯ ಮಹತ್ವದ ಲೇಖಗಳನ್ನು ಆಯ್ದು ತಿಂಗಳಿಗೊಮ್ಮೆ ಪ್ರಸಿದ್ಧಮಾಡುವ ಉಪಕ್ರಮವನ್ನು ಈ ಪುಸ್ತಕ ಪ್ರಪಂಚದಲ್ಲಿ ಮಾಡಲಾಗಿದೆ. ಇಂಗ್ಲೀಷಿನಲ್ಲಿ ಪ್ರಸಿದ್ಧವಾಗುತಿರುವ Digest ಮಾದರಿಯ ಪ್ರಪಂಚವಿದು. ಕ್ರೌನ ಅಷ್ಟ ಪತ್ರದ ೬೨ ಪುಟಗಳು. ಮೊದಲನೆಯ ಸಂಚಿಕೆಯಲ್ಲಿ ಬೇರೆ ಬೇರೆ ೧೩ ಬರೆಹಗಳಿದ್ದು, ಕೊನೆಯಲ್ಲಿ ವಸ್ತುಕೋಶವೆಂಬ ವಿಮರ್ಶಭಾಗವನ್ನು ಕೊಡಲಾಗಿದೆ. ಶ್ರೀ ಹಣಮಂತರಾಯರು ಪ್ರಾರಂಭಿಸಿದ ಈ ಹೊಸ ಉಪಕ್ರಮಕ್ಕೆ ಕನ್ನಡಿಗರು ಒಳ್ಳೆ ಪ್ರೋತ್ಸಾಹ ಕೊಡಬೇಕೆಂದು ಕೋರುತ್ತೇವೆ. ಶಾಲೆ ಕಾಲೇಜಗಳ ವಾಚನಾಲಯಗಳಲ್ಲಿ ಮತ್ತು ಸಾರ್ವಜನಿಕ ವಾಚನಾಲಯಗಳಲ್ಲಿ ಈ ಬಗೆಯ ಸಾಹಿತ್ಯವನ್ನಿಡುವದು ಅತ್ಯವಶ್ಯವೆಂದು ಹೇಳಬಯಸುತ್ತೇವೆ. ಬೇರೆ ಬೇರೆ ವಿಷಯಗಳ ಜ್ಞಾನವನ್ನು ಮಕ್ಕಳಿಗೆ ಮಾಡಿಕೊಡಲು ಇದು ಸಹಾಯಕವಾಗುವದು. ಸಂಪಾದಕರು ಬರೆಹಗಳನ್ನು ಆಯ್ದುಕೊಳ್ಳುವಲ್ಲಿ ಹೆಚ್ಚು ಪರಿಶ್ರಮ ಪಟ್ಟು ಎಲ್ಲ ದೃಷ್ಟಿಯಿಂದ ಆದರ್ಶವಾಗುವಂತಹ ಲೇಖಗಳನ್ನೇ ಆಯ್ದುಕೊಳ್ಳಬೇಕಲ್ಲದೆ ಅವುಗಳ ಸಾರವನ್ನು ತೆಗೆಯುವಲ್ಲಿಯೂ ಹೆಚ್ಚು ದಕ್ಷತೆ ವಹಿಸಬೇಕೆಂದು ಸೂಚಿಸಬಯಸುತ್ತೇವೆ. ಪ್ರಪಂಚವು ಯಶಸ್ವಿಯಾಗಲಿ.

आपला आहार:— Published by Civil Supplies Department Government of Bombay- ಡೆಮಿ ಅಷ್ಟ ಪತ್ರ ೫೪ ಪುಟಗಳು ಬೆಲೆ— ೧೨ ಆಣೆ.

ಮುಂಬಯಿ ಸರಕಾರದ ನಾಗರಿಕ ಪೂರಯಿಕೆ ಶಾಖೆಯವರು ಪ್ರಸಿದ್ಧಿಸಿದ ಈ ಪುಸ್ತಕದಲ್ಲಿ ಆಹಾರದ ಸಂಬಂಧದಲ್ಲಿ ಉಪಯುಕ್ತ ವಿಷಯಗಳು ಸಂಗ್ರಹಿಸಲ್ಪಟ್ಟಿವೆ. ಹಿಂದುಸ್ತಾನದಲ್ಲಿ ಇದೀಗ ಆಹಾರ ಸಮಸ್ಯೆ ಎಲ್ಲರನ್ನು ಬಾಧಿಸುತ್ತದೆ ಎಲ್ಲರಿಗೂ ಒಳ್ಳೆ ಆಹಾರ ಸಾಕಷ್ಟು ಪ್ರಮಾಣದಲ್ಲಿ ಹೇಗೆ ಸಿಕ್ಕಬಹುದೆಂಬ ಬಗ್ಗೆ ಅಧಿಕಾರಿಗಳು ರಾಷ್ಟ್ರಮುಖಂಡರು ತಲೆ ತುರಿಸಿಕೊಳ್ಳಹತ್ತಿದ್ದಾರೆ. ಮನುಷ್ಯನಿಗೆ ಸಾಧಾರಣವಾಗಿ ಬೇಕಾಗುತಿರುವ ಆಹಾರದ ಅರ್ಧದಷ್ಟು ಆಹಾರ ಕೂಡ ಭಾರತೀಯರಿಗೆ ಸಿಕ್ಕುತಿಲ್ಲವಾದ್ದರಿಂದ ಅವರು ದಿನದಿನಕ್ಕೆ ಶಕ್ತಿವಿಹೀನರಾಗುತಿರುವರು. ಪ್ರಸ್ತುತ ಪುಸ್ತಕದಂತೆ ಪ್ರತಿಯೊಬ್ಬ[illegible] ಸರ್ವಸಾಧಾರಣವಾಗಿ ೧೦ ಔಂಸು ಅಕ್ಕಿ ಜ[illegible] ಜೋಳ ೩ ಔಂಸ ಬೇಳೆಕಾಳುಗಳು ೮ [illegible] ಹಾಲು ಸಿಕ್ಕುವದವಶ್ಯವಾಗಿದೆ. ಪಲ್ಲೆ ಕಾ[illegible] ಮೊದಲಾದ ಪದಾರ್ಥಗಳು ಬೇರೆ. ಆದರೆ [illegible] ನಮಗೆ ಕೊಡುತಿರುವ ಸೀದಾ ಪ್ರಮಾಣವೇನು? ಇಷ್ಟರಿಂದ ಜನ ಬದುಕುವದೆಂತು? ನಮ್ಮಲ್ಲಿಯ ಆಹಾರವನ್ನು ಸತ್ವಯುತ ಹೇಗೆ ಮಾಡಿಕೊಳ್ಳಬೇಕು? ಆಹಾರ ನಿಯಂತ್ರಣ ಯೋಜನೆಯ ಪರಿಣಾಮವೇನು ? ನಮ್ಮ ಆಹಾರದಲ್ಲಿ ಸಕ್ಕರೆಯ ಅವಶ್ಯಕತೆ ಏಕೆ ಇದೆ ಮುಂತಾದ್ದನ್ನೆಲ್ಲ ಈ ಪುಸ್ತಕದಲ್ಲಿ ವಿವರಿಸಲಾಗಿದೆ. ಮನುಷ್ಯನಿಗೆ ಯಥೋಚಿತ ಮತ್ತು ಪ್ರಮಾಣಬದ್ಧ ಆಹಾರ ಸಿಕ್ಕರೆ ಅವನ ಪ್ರಕೃತಿ ನಿರೋಗಿಯಾಗುಳಿಯುವುದರಲ್ಲಿ ಸಂದೇಹವಿಲ್ಲ. ಈ ವಿಷಯವನ್ನು ಈ ಪುಸ್ತಕದಲ್ಲಿ ಚೆನ್ನಾಗಿ ವಿವರಿಸಲಾಗಿದೆ. ಮರಾಠಿ ಬಂದವರಿಗೆ ಇದು ಒಳ್ಳೆ ಉಪಯುಕ್ತವಾಗಿದೆ. ಆದರೆ ಮುಂಬಯಿ ಪ್ರಾಂತದಲ್ಲಿ ಕನ್ನಡ ಮರಾಠಿ ಗುಜರಾಥಿ ಭಾಷೆಗಳು ಪ್ರಾಮುಖ್ಯವಾಗಿ ನಡೆಯುತಿವೆಂಬದನ್ನು ಅರಿತಿದ್ದ ನಾಗರಿಕ ಪೂರಯಿಕೆ ಶಾಖೆಯವರು ಮರಾಠಿಯಲ್ಲಿ ಮಾತ್ರ ಇಂಥ ಪುಸ್ತಕವನ್ನು ಪ್ರಸಿದ್ಧಿಸಿದ್ದು ಶೋಚನೀಯವಾಗಿದೆ. ನಮಗೆ ತಿಳಿದ ಮಟ್ಟಿಗೆ ಕನ್ನಡದಲ್ಲಿ ಇಂಥ ಪುಸ್ತಕ ಸರಕಾರದಿಂದ ಈ ವರೆಗೆ ಪ್ರಕಟವಾಗಿಲ್ಲ. ಈಗಲಾದರೂ ಕನ್ನಡ ಗುಜರಾಥಿ ಹಿಂದುಸ್ತಾನೀ ಭಾಷೆಗಳಲ್ಲಿಯೂ ಆದಷ್ಟು ಬೇಗ ಈ ಪುಸ್ತಕವನ್ನು ಪ್ರಸಿದ್ಧಿಸಬೇಕು. ಇನ್ನು ಮುಂದೆ ಯಾವದೇ ಪ್ರಕಟನೆಯನ್ನು ಹೊರಡಿಸಿದರೂ ಪ್ರಾಂತದ ಮುಖ್ಯ ಭಾಷೆಗಳಲ್ಲಿ ಮತ್ತು ರಾಷ್ಟ್ರಭಾಷೆಯಾದ ಹಿಂದುಸ್ತಾನಿಯಲ್ಲಿ ಪ್ರಸಿದ್ಧಿಸಬೇಕೆಂದು ಒತ್ತಾಯ ಪಡಿಸುತ್ತೇವೆ.





ಸಂಪಾದಕೀಯ

# ಟೀಕೆ-ಟಿಪ್ಪಣೆಗಳು

## ಬೆನ್ನಿನಲ್ಲಿ ಇರಿದರು

ಬ್ರಿಟಿಶ್ ಮಂತ್ರಿತ್ರಯರ ಮೇ ೧೬ನೇ ತಾರೀಕಿನ ಘೋಷಣೆ ವಿಶೇಷತಃ ೧೯ (ಜ) ಮತ್ತು (೮) ಕಲಮುಗಳ ಅರ್ಥದ ವಿವರಣೆಯ ಬಗೆಗೆ ಕಾಂಗ್ರೆಸ ಮತ್ತು ಮುಸ್ಲಿಂಲೀಗುಗಳಲ್ಲಿ ಭಿನ್ನಾಭಿಪ್ರಾಯವಾಗಿದ್ದಿತಷ್ಟೆ. ಈ ಸಮಯದಲ್ಲಿ ಬ್ರಿಟಿಶ್ ಸರಕಾರದವರು ಸ್ವಲ್ಪ ಮುತ್ಸದ್ದಿತನವನ್ನು ತೋರಿಸಿ ನಡುಗಾಲ ಸರಕಾರದಲ್ಲಿ ಸೇರಿದವರು ಘಟನಾ ಸಮಿತಿಯಲ್ಲಿ ಭಾಗವಹಿಸಲೇಬೇಕೆಂದು ಒತ್ತಾಯಪಡಿಸಬೇಕಿತ್ತು. ಆದರೆ ಒಡಕು ಹುಟ್ಟಿಸಿ ಆಳುವ ತಮ್ಮ ನೀತಿಗನುಸಾರವಾಗಿ ಅವರು ಕಾಂಗ್ರೆಸ ಮತ್ತು ಲೀಗ ಧುರೀಣರನ್ನು ಲಂಡನ್ನಿಗೆ ಕರೆಯಿಸಿಕೊಳ್ಳುವ ಆಟ ಹೂಡಿ ಗುಡ್ಡ ತೋಡಿ ಇಲಿಯನ್ನು ಹೊರತೆಗೆದಿರುವರು. ಲಂಡನಿನಲ್ಲಿ ಹಿಂದೀ ಮುಖಂಡರೊಡನೆ ಬ್ರಿಟಿಶ್ ಸರಕಾರದವರು ಮಾತುಕತೆ ನಡೆಸಿ ಮುಸ್ಲಿಂ ಲೀಗಿನವರಂತೆಯೆ ತಮ್ಮ ಅಭಿಪ್ರಾಯವಾಗಿದೆಂದು ಪ್ರಕಟನೆ ಹೊರಡಿಸಿರುವರು. ಇಷ್ಟು ಹೇಳಬೇಕಾಗಿದ್ದರೆ ಜವಾಹರಲಾಲ ಪ್ರಭೃತಿಗಳನ್ನು ಅಷ್ಟೇ ಏಕೆ ಜಿನ್ನಾರನ್ನಾದರೂ ಲಂಡನಿಗೆ ಕರೆಸಿಕೊಳ್ಳುವ ಅವಶ್ಯಕತೆಯೆನಿತ್ತೋ ತಿಳಿಯದು! ಇದು ಕೇವಲ ಕಾಲ ಮತ್ತು ಹಣದ ಅಪವ್ಯಯವಾಗಿದೆಯಲ್ಲದೆ ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸಲು ಅವಕಾಶ ಕಲ್ಪಿಸಿಕೊಟ್ಟಿದೆ. ಆ ಕಲಮನ್ನು ಹಾಕುವಾಗ ಮಂತ್ರಿತ್ರಯದ ಉದ್ದೇಶ ಹೀಗಿದ್ದಿತೆಂದು ಸರಕಾರದವರು ಹೇಳಿಬಿಟ್ಟಿದ್ದರಿಂದ ಪ್ರಶ್ನೆ ವರಿಷ್ಠ ನ್ಯಾಯಾಸನದ ಮುಂದೆ ಹೋಗಲು ಕೂಡ ಪೂರ್ವಗ್ರಹದೂಷಿತವಾದಂತಾಗಿದೆ. ಗುಂಪುಗಳ ಸಂಬಂಧದ ಇದೊಂದು ಮಹತ್ವದ ವಿಷಯವನ್ನು ನ್ಯಾಯಾಸನದ ಮುಂದೆ ಮುಂಡಿಸಬಹುದೆಂದು ಕಾಂಗ್ರೆಸ್ಸಿನ ಅಭಿಪ್ರಾಯವಿದ್ದರೆ ಮತಭೇದದ ಎಲ್ಲ ಪ್ರಶ್ನೆಗಳನ್ನೂ ಸಂಯುಕ್ತ ನ್ಯಾಯಾಲಯದ ನಿರ್ಣಯಕ್ಕೆ ಒಪ್ಪಿಸಬಹುದೆಂದು ಸರಕಾರದ ಪ್ರಕಟನೆಯ ಅಭಿಪ್ರಾಯ. ಘಟನಾ ಸಮಿತಿಯ ಸದಸ್ಯರ ಮತ್ತು ಅಧ್ಯಕ್ಷರ ನಿರ್ಣಾಯಕ ಶಕ್ತಿಯನ್ನೆ ಇದರಿಂದ ಅಲ್ಲಗಳೆದಿದ್ದಾರೆ ಬ್ರಿಟಿಶ ಸರಕಾರದವರು. ಹೀಗೆ ಎಲ್ಲ ವಿಷಯಗಳನ್ನು ಕೋರ್ಟಿಗೆ ಒಯ್ಯುವುದಾದರೆ ಘಟನೆಯನ್ನು ಸಿದ್ಧಪಡಿಸುವದು ಘಟನಾ ಸಮಿತಿಯಾಗದೆ ನ್ಯಾಯಾಸನವೆ ಅದನ್ನು ಸಿದ್ಧಪಡಿಸಿದಂತಾಗುವದು. ಅಲ್ಲದೆ ಅಲ್ಪಸಂಖ್ಯಾಕ ಪಕ್ಷವು ಯಾವುದೊಂದು ಬಹುಸಂಖ್ಯಾಕ ಪಕ್ಷದ ಪ್ರಗತಿಗೆ ಅಡ್ಡಿಯನ್ನುಂಟುಮಾಡದೆಂದು ಮಾರ್ಚದಲ್ಲಿ ಹೇಳಿದ್ದ ಬ್ರಿಟಿಶ ಮುಖ್ಯಮಂತ್ರಿಗಳು ಮೊನ್ನಿನ ಪ್ರಕಟನೆಯಿಂದ ತಮ್ಮ ಹಿಂದಿನ ವಚನವನ್ನು ಮುರಿದುಬಿಟ್ಟದ್ದಾರೆ. ಯಾವ ಅಲ್ಪಸಂಖ್ಯಾಕ ಪಕ್ಷಗಳ ಮೇಲೆಯೂ ಒತ್ತಾಯದಿಂದ ಯಾವುದನ್ನು ಹೇರಲಾರೆವೆಂದು ಸರಕಾರದವರು ಸಾರಿರುವರು. ಇದನ್ನು ನೋಡಿದರೆ ಸರಕಾರದವರು ಇಲ್ಲಿನ ಪಕ್ಷ ಪಂಗಡಗಳಲ್ಲಿನ ಮತಭೇದದ ಅವಾಸ್ತವ ಲಾಭ ತೆಗೆದುಕೊಂಡು ತಮ್ಮ ಕಪಿಮುಷ್ಟಿಯನ್ನು ಇನ್ನೂ ಬಲಿಷ್ಠ ಮಾಡಬಯಸುತಿರುವರೆಂಬುದು ಸ್ಪಷ್ಟವಾಗುವದು. ಬ್ರಿಟಿಶ್‌ರ ಚಾಣಕ್ಯನೀತಿಗೆ ಇದು ತಕ್ಕದೇ ಎಂದು ಹೇಳಬೇಕಾಗುವುದು.

## ಅನಿರೀಕ್ಷಿತವೇನೂ ಅಲ್ಲ

ಬ್ರಿಟಿಶ್ ಧೋರಣದ ಪೂರ್ವಾಪರಗಳನ್ನರಿತವರಿಗೆ ಕಾಂಗ್ರೆಸ್ಸಿಗೆ ಹೀಗೆ ಬೆನ್ನಿನಲ್ಲಿ ಇರಿದದ್ದೇನು ಅನಿರೀಕ್ಷಿತವಲ್ಲ, ಆಶ್ಚರ್ಯಕರವೂ ಅಲ್ಲ ಎಂದೆನಿಸದಿರಲಾರದು. ಬ್ರಿಟಿಶ ಸರಕಾರದ ಈವರೆಗಿನ ಪರಂಪರೆಯನ್ನು ನೋಡಿದರೆ ಆಯತ್ತ ಸಮಯದಲ್ಲಿ ಅವರು ಹೀಗೆಯೇ ವಿಶ್ವಾಸಘಾತ ಮಾಡಿ ತಮ್ಮ ಸ್ವಾರ್ಥವನ್ನು ಸಾಧಿಸಿಕೊಂಡುದುಂಟೆಂಬುದು ಕಂಡು ಬರುವದು. ೧೯೨೧-೨೨ ರಲ್ಲಿ ಆಯರ್ಲಂಡಿನೊಡನೆ ಬ್ರಿಟನ್ನು ಒಪ್ಪಂದ ಮಾಡಿಕೊಂಡಿತಷ್ಟೆ. ಆಗ ಗಡಿಯ ಸಂಬಂಧದ ಕಲಮಿಗೆ ಸರಕಾರ ಆಯರ್ಲಂಡಮುಖಂಡರಿಗೆ ಒಂದರ್ಥ ಹೇಳಿದರೆ ಲಾಯಿಡ್ ಜಾರ್ಜರು ಅದಕ್ಕೆ ಬೇರೊಂದು ಅರ್ಥವನ್ನೆ ಘೋಷಿಸಿ ಆಯರ್ಲಂಡದಲ್ಲಿ ಅನೈಕ್ಯದ ಬೀಜವನ್ನು ಬಿತ್ತಿದರು. ಪಾಲಿಸ್ತಾನ ರಾಷ್ಟ್ರವಾಗಿ ಮಾಡಬೇಕೆಂದು ರಾಷ್ಟ್ರಸಂಘದವರು ನಿಶ್ಚಿತವಾಗಿ ಅಭಿಪ್ರಾಯಪಟ್ಟದ್ದರೂ ಬ್ರಿಟಿಶ್‌ರು ಅದನ್ನು ಪೂರೈಸದೆ ಅರಬರನ್ನೊಮ್ಮೆ ಯಹೂದ್ಯರನ್ನೊಮ್ಮೆ ಎತ್ತಿಕಟ್ಟಿ ಈಗ ಅಮೇರಿಕೆಯ ಒತ್ತಾಯದಿಂದ ಯಹೂದ್ಯರಿಗೆ ಸಹಾನುಭೂತಿ ತೋರಿಸುತಿದ್ದಾರೆ. ಪಾಲಿಸ್ತಾನವನ್ನು ನಾಲ್ಕು ಭಾಗಗಳನ್ನಾಗಿ ಒಡೆಯಲು ಹವಣಿಸುತ್ತಿದ್ದಾರೆ. ಇಜಿಪ್ತದಲ್ಲಿಯೂ ಬ್ರಿಟಿಶ್‌ರು ತಮ್ಮ ಕೈವಾಡವನ್ನು ನಡೆಸಿದ್ದಾರೆ. ಇಜಿಪ್ತ ಮತ್ತು ಸುದಾನ ಜನರಲ್ಲಿ ಒಡಕು ಹುಟ್ಟಿಸಿ ಅಲ್ಲಿಯೂ ಪಾಕಿಸ್ತಾನವನ್ನು ಸ್ಥಾಪಿಸಲು ಪ್ರಯತ್ನಿಸಿದ್ದಾರೆ. ಇಜಿಪ್ತದಲ್ಲಿಯೆ ಉಳಿಯುವದು ಸುದಾನಕ್ಕೆ ಹಿತಕರವಾಗಿದ್ದರೂ ಬೇರ್ಪಾಟಿನ ಮನೋವೃತ್ತಿಯನ್ನು ಕ್ರಮಶಃ ಅಲ್ಲಿ ಉಂಟುಮಾಡಿದ್ದಾರೆ. ಸುದಾನ ಜನರನ್ನು ಸ್ವರಾಜ್ಯಕ್ಕೆ ಪಾತ್ರರನ್ನಾಗಿ ಮಾಡುವದೆ ತಮ್ಮ ಧೋರಣವೆಂದು ಗವರ್ನರ ಜನರಲ್‌ರು ಸಾರಿ ಈ ಬೇರ್ಪಾಟ ಮನೋವೃತ್ತಿಗೆ ಬೆಂಬಲ ಕೊಟ್ಟದ್ದಾರೆ. ಈ ಧೋರಣೆ ಸಿದ್ದೀಕ ಪಾಶಾ-ಬೆವಿನ್ ಕರಾರಿಗೆ ವಿರೋಧಕವಾಗಿದೆಂದು ಹೇಳಿ ಮುಖ್ಯ ಮಂತ್ರಿ ಸಿದ್ದೀಕರು ರಾಜೀನಾಮೆ ಕೊಡಬೇಕಾಯಿತು. ಇರಾಣದ ಅಂತರ್ಯುದ್ಧದಲ್ಲಿಯೂ ಬ್ರಿಟಿಶರ ಕೈವಾಡವಿದೆಯೆಂದು ಆರೋಪವುಂಟು. ಇದನ್ನೆಲ್ಲ ನೋಡಿದವರಿಗೆ ಹಿಂದುಸ್ತಾನದಲ್ಲಿ ಬ್ರಿಟಿಶ್‌ರು ನಡೆಸಿದ ಈ ಶಕುನಿ ತಂತ್ರ ಹೊಸತೇನೂ ಅಲ್ಲೆಂಬುದು ಸ್ಪಷ್ಟವಾಗುವದು.

## ಬ್ರಿಟಿಶ್‌ರ ಭೇದನೀತಿಗೆ ಯಶಸ್ಸು

ಲಂಡನದಲ್ಲಿ ನಡೆದ ಮಾತುಕತೆ ತದನಂತರ ಬ್ರಿಟಿಶ ಸರಕಾರದವರು ಹೊರಡಿಸಿದ ಪ್ರಕಟನೆ ಮೊದಲಾದವುಗಳನ್ನು ನೋಡಿದರೆ ಬ್ರಿಟಿಶ್‌ರ ಭೇದನೀತಿಗೆ ಯಶಸ್ಸು ಸಿಕ್ಕಿತೆಂಬುದು ಖಂಡಿತವಾಗುವದು. ಮುಸ್ಲಿಂ ಲೀಗ ಧುರೀಣರಾದ ಬ್ಯಾ. ಜಿನ್ನಾಸಾಹೇಬರು ಈಗಲೂ ಲಂಡನಿನಲ್ಲಿಳಿದು ತಮ್ಮ ಕಾರಸ್ಥಾನಗಳನ್ನು ಬ್ರಿಟಿಶ್ ಪ್ರತಿಗಾಮಿಗಳ ಮುಖಾಂತರ ಯಶಸ್ವಿಮಾಡಲು ಪ್ರಯತ್ನಿಸುತಿದ್ದಾರೆ. ಹಿಂದುಸ್ತಾನದ ಸಮಸ್ಯೆಯ ಸಂಬಂಧದ ಚರ್ಚೆ ಕಾಮನ್ಸ ಸಭೆಯಲ್ಲಿ ಈಗಲೆ ನಡೆಯಬೇಕೆಂದು ಚರ್ಚಿಲ್ಲರು ಆಗ್ರಹ ತಳೆದದ್ದರಲ್ಲಿಯೂ ರಹಸ್ಯವಿಲ್ಲದೆ ಇಲ್ಲ. ಈ ಚರ್ಚೆ ನಡೆವ ಕಾಲಕ್ಕೆ ಬ್ಯಾ. ಜಿನ್ನಾ ಮತ್ತು ಲಿಯಾಕತ ಅಲ್ಲೀಖಾನರು ಲಂಡನಿನಲ್ಲಿಯೇ ಉಳಿಯುವರು. ಇದನ್ನೆಲ್ಲ ನೋಡಿದರೆ ಮುಸ್ಲಿಂ ಲೀಗಿನವರು ತಮ್ಮ ಘಾತಕ ಧ್ಯೇಯಸಾಧನೆಗಾಗಿ ಬ್ರಿಟಿಶ್ ಪ್ರತಿಗಾಮಿಗಳ ಸಹಾಯವನ್ನೆಂತು ಪಡೆಯಹತ್ತಿರುವರೆಂಬುದು ಒಡೆದು ಕಾಣುತಿದೆ. ಬ್ರಿಟಿಶ್‌ರಿಗಾದರೂ ಇಷ್ಟೇ ಬೇಕಾಗಿದೆ. ಭಾರತೀಯರು ತಮ್ಮ ತಮ್ಮಲ್ಲಿ ಹೀಗೆಯೆ ಬಡೆದಾಡುತ್ತ ಕುಳಿತರೆ ಇಲ್ಲಿ ತಮಗೆ ಚಕ್ಕಂದವಾಡಲು ಸಾಕಷ್ಟು ಅವಕಾಶ ಸಿಕ್ಕುವುದೆಂಬುದು ಅವರಿಗೆ ಮುಂದಟ್ಟಾಗಿದೆ. ಆ ದೃಷ್ಟಿಯಿಂದಲೆ ಅವರು ಇದೆಲ್ಲ ಆಟವನ್ನು ಹೂಡಿರುವರು. ಬ್ರಿಟಿಶ್ ಕೂಲಿಕಾರ ಸರಕಾರದಲ್ಲಿಯೂ ಅಷ್ಟೊಂದು ನೀರು ಇಲ್ಲದ್ದರಿಂದ ಮತ್ತು ಸ್ವಕೀಯರ ಸ್ವಾರ್ಥ ಮುಂದೆ ಬರುವುದರಿಂದ 'ರಾಮಾಯ ಸ್ವಸ್ತಿ ರಾವಣಾಯ ಸ್ವಸ್ತಿ' ಎಂಬಂತೆ ಕಾಂಗ್ರೆಸ್ಸನ್ನೂ ಸಂತುಷ್ಟಪಡಿಸಲು ಬಯಸುವರು ಮುಸ್ಲಿಂ ಲೀಗನ್ನೂ ಎತ್ತಿಹಿಡಿಯುವರು. ಘೋಷಣೆಯ ಕಲಾಪಗಳಿಗೆ ಮುಸ್ಲಿಂ ಲೀಗು ಮಾಡಿಕೊಂಡ ಅರ್ಥ ಸರಿಯೆಂದು ಹೇಳುತಿರುವಾಗಲೆ ಕಾಂಗ್ರೆಸ್ಸಿನವರು ಬೇಕಾದರೆ ವಿವರಣೆಗಾಗಿ ನ್ಯಾಯಾಲಯಕ್ಕೆ ಹೋಗಬಹುದೆಂದೂ ಹೇಳಿರುವರು. ಅಂದರೆ ಕಾಂಗ್ರೆಸ್ಸು ಮತ್ತು ಲೀಗಿನವರು ಹೀಗೆಯೇ ಬ್ರಿಟಿಶ್ ಪ್ರಕಟನೆಯ ಅರ್ಥದ ಬಡೆದಾಟದಲ್ಲಿಯೇ ಕಾಲ ಕಳೆಯಹತ್ತಿದರೆ ಹೊಸ ಘಟನೆ ಮುಂತಾದ್ದೆಲ್ಲ ಹಾಗೆಯೇ ನೆನಗುದಿಗೆ ಬೀಳುವದೆಂದು ಅವರ ಮುಂದಾಲೋಚನೆ. ಈ ರೀತಿಯಾಗಿ ಬ್ರಿಟಿಶ್‌ರ ಭೇದನೀತಿ ವಿಜಯಿಯಾಗುತ್ತ ನಡೆದುದು ದೇಶದ ದುರ್ದೈವವು. ಬ್ಯಾ. ಜಿನ್ನಾಸಾಹೇಬರು ತಮ್ಮ ಘಾತಕ ಧೋರಣವನ್ನು ಬದಲಿಸುವವರೆಗೆ ಸದ್ಯದ ದುಃಸ್ಥಿತಿ ದೂರಾಗಲಾರದು. ಈ ಧೋರಣದಿಂದ ಮುಸ್ಲಿಂ ಲೀಗಿಗಾದರೂ ಪಾಕಿಸ್ತಾನ ದೊರೆಯುವದೋ ಅದೂ ಇಲ್ಲ. ಬ್ರಿಟಿಶ್‌ರ ಆಳಿಕೆ ಮಾತ್ರ ಹಿಂದುಸ್ತಾನದಲ್ಲಿ ಭದ್ರವಾಗುತ್ತ ನಡೆವುದು. ಹಿಂದುಸ್ತಾನದ ಸ್ವಾತಂತ್ರ್ಯ ಬೇಡುತಿರುವಾಗಲೆ ಲೀಗಿನವರು ದೇಶದ ದಾಸ್ಯವನ್ನು ಬಿಗಿಮಾಡುತಿರುವರು. ಇದಾವ ಧೋರಣೆಯೋ ತಿಳಿಯದು.!!

## ಘಟನಾ ಸಮಿತಿ

ಬ್ರಿಟಿಶ್ ಸರಕಾರದವರು ಈ ರೀತಿ ಅನುಚಿತ ಮತ್ತು ಅವಿವೇಕದ ಪ್ರಕಟನೆ ಹೊರಡಿಸಿ ಘಟನಾ ಸಮಿತಿಯ ಮಹತ್ವವನ್ನೇ ಕಡಮೆ ಮಾಡಿಬಿಟ್ಟರುವರು. ಮುಸ್ಲಿಂ ಲೀಗಿನವರು ತಮ್ಮ ಮುಂಬಯಿ ಗೊತ್ತುವಳಿಯನ್ನು ಇನ್ನೂ ಹಿಂತಗೆದುಕೊಳ್ಳದ್ದರಿಂದ ಲೀಗಿನ ಸದಸ್ಯರಾರೂ ಉಪಸ್ಥಿತರಾಗಿಲ್ಲ. ಘಟನಾ ಸಮಿತಿಯಲ್ಲಿಯ ಯಾವದೇ ಮುದ್ದೆಯ ವಿವರಣೆಯನ್ನು ನ್ಯಾಯಾಲಯದಿಂದ ನಿರ್ಣಯಿಸಿಕೊಳ್ಳಬಹುದೆಂದು ಸರಕಾರದವರು ತಮ್ಮ ಪ್ರಕಟನೆಯಲ್ಲಿ ಹೇಳಿಬಿಟ್ಟದ್ದರಿಂದ ಘಟನಾ ಸಮಿತಿಯ ಮತ್ತು ಅದರ ಅಧ್ಯಕ್ಷರ ನಿರ್ಣಾಯಕ ಶಕ್ತಿಯನ್ನೆ ಆಕ್ಷೇಪಿಸಿದಂತಾಗಿದೆ. ಭಾರತೀಯರು ಘಟನಾಸಮಿತಿಯಲ್ಲಿ ಎಷ್ಟೊಂದು ಉತ್ಸಾಹದಿಂದ ಕೂಡಿ ಹಿಂದುಸ್ತಾನದ 'ಅಮರ' ಘಟನೆಯನ್ನು ಸಿದ್ಧಪಡಿಸಬೇಕೆಂದು ಅಣಿಯಾಗಿದ್ದರೋ ಆ ಹುರುಪು ಉತ್ಸಾಹವೆಲ್ಲ ಬ್ರಿಟಿಶರ ಕುಟಿಲ ಕಾರಸ್ಥಾನದಿಂದ ಇಲ್ಲದಂತಾಗಿದೆ. ನಿಮಿತ್ತ ಮಾತ್ರಕ್ಕೆ ಸಮಿತಿಯ ಕಾರ್ಯ ನಡೆದಂತಾಗಿದೆ. ಮುಸ್ಲಿಂ ಲೀಗಿನವರು ತಮ್ಮ ಮೊದಲಿನ ಧೋರಣವನ್ನು ಬಿಟ್ಟುಗೊಟ್ಟು ಹಿಂದುಸ್ತಾನದ ಘಟನೆಯನ್ನು ಸಿದ್ಧಪಡಿಸುವ ಉಚ್ಚ ಉದ್ದೇಶದಿಂದ ಸಮಿತಿಯಲ್ಲಿ ಭಾಗವಹಿಸಬೇಕು ಮತ್ತು ಅದರಲ್ಲಿ ಸ್ವೀಕೃತವಾಗುವ ಘಟನೆಯನ್ನು ಬ್ರಿಟಿಶ ಸರಕಾರದವರು ಕಾರ್ಯಕಾರಿ ಮಾಡುವವೆಂದು. ಸಾರಬೇಕು ಅಂದರೆ ಮಾತ್ರ ಸಮಿತಿಯಲ್ಲಿ ಅಪೇಕ್ಷಿಸಿದ ಉತ್ಸಾಹ ಬರುವದು. ಮಹತ್ವದ ಮತಭೇದದ ಪ್ರಶ್ನೆಯೇನಾದರೂ ಉಪಸ್ಥಿತವಾದರೆ ಸಂಯುಕ್ತ ನ್ಯಾಯಾಲಯದಿಂದ ನಿರ್ಣಯ ಪಡೆಯಬೇಕು. ಅದು ಎಲ್ಲರಿಗೂ ಬಂಧಕವಾಗಿರಬೇಕು. ಇದೆಲ್ಲ ಮಾರ್ಪಾಟಾದರೆ ಮಾತ್ರ ಘಟನಾಸಮಿತಿ ಸಾರ್ಥಕವಾಗಬಹುದು. ಆದರೆ ಬ್ರಿಟಿಶ ಸರಕಾರದ ಮತ್ತು ಮುಸ್ಲಿಂ ಲೀಗಿನ ಸದ್ಯದ ಧೋರಣವನ್ನು ನೋಡಿದರೆ ಇಂಥ ಅನುಕೂಲ ಪರಿಸ್ಥಿತಿಯನ್ನು ಕಲ್ಪಿಸಲು ಅವರು ಸಿದ್ಧರಿಲ್ಲೆಂದು ತೋರುವದು. ಅಂತೆಯೆ ಸದಸ್ಯರಲ್ಲೆಲ್ಲ ನಿರಾಶೆಯ ಛಾಯೆ ಒಡಮೂಡಿದೆ. ಈ ಪರಿಸ್ಥಿತಿಯಲ್ಲಿ ಘಟನೆಯನ್ನು ಸಿದ್ಧಪಡಿಸಬೇಕೋ ಬಾರದೊ ಎಂಬ ಉದ್ಗಾರಗಳೂ ಹೊರಡಹತ್ತಿವೆ. ಘಟನಾ ಸಮಿತಿಗೆ ಬಾಲಗ್ರಹ ಬಂದಂತಾಗಿದೆ. ಅದರಿಂದ ಬದುಕಿ ಅದು ಹಿಂದುಸ್ತಾನದ ಸ್ವಾತಂತ್ರ್ಯ ಘಟನೆಯನ್ನು ಸಿದ್ಧಪಡಿಸಲು ಸಮರ್ಥವಾಗಲೆಂದು ಈ ಸಮಯದಲ್ಲಿ ಹಾರೈಸುವದಷ್ಟೆ ನಮ್ಮ ಕರ್ತವ್ಯವಾಗಿದೆ.

## ಭಾಷಾನ್ವಯ ಪ್ರಾಂತ ರಚನೆ

ಘಟನಾ ಸಮಿತಿಯು ಭಾಷಾನ್ವಯ ಪ್ರಾಂತರಚನೆಯ ಪ್ರಶ್ನೆಯನ್ನು ಚರ್ಚಿಸಲಾರದು ಎಂಬುದಾಗಿ ಕೆಲವರು ವಾದಿಸಹತ್ತಿರುವರು. ಹಿಂದುಸ್ತಾನದ ಘಟನೆಯನ್ನು ಸಿದ್ಧಪಡಿಸಲು ಕೂಡಿರುವ ಘಟನಾ ಸಮಿತಿಯು ಪ್ರಾಂತಗಳ ಪುನರ್ರಚನೆಯ ಪ್ರಶ್ನೆಯನ್ನು ವಿಚಾರಿಸಲಾಗದೆಂದು ಹೇಳುವುದು ಅದಾವ ನ್ಯಾಯವೋ? ಘಟನಾ ಸಮಿತಿಯು ಪ್ರಾಂತಗಳ ಪುನರ್ರಚನೆಯ ಪ್ರಶ್ನೆಯನ್ನೆತ್ತಿ ಆ ಬಗ್ಗೆ ಸೂಕ್ತ ಸಲಹೆ ಕೊಡಲು ಅಧಿಕೃತವಿದೆಂಬುದಾಗಿ ಪ್ರತಿಪಾದಿಸಿ ಆ ಸಂಬಂಧದ ತನ್ನ ಬೇಡಿಕೆಯನ್ನು ಮುಂಡಿಸುವುದಕ್ಕಾಗಿ ಹೊಸದಿಲ್ಲಿಯಲ್ಲಿ ೮ ನೇ ತಾರೀಕು ಡಾ. ಪಟ್ಟಾಭಿ ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಭಾಷಾನ್ವಯ ಮತ್ತು ಸಾಂಸ್ಕೃತಿಕ ಪ್ರಾಂತ ನಿರ್ಮಾಣ ಪರಿಷತ್ತು ಕೂಡಿದ್ದಿತು. ಆ ಪರಿಷತ್ತಿನ ಕಾರ್ಯಕಲಾಪಗಳನ್ನು ಇದೇ ಸಂಚಿಕೆಯಲ್ಲಿ ಬೇರೆ ಕಡೆಗೆ ಕೊಟ್ಟಿದ್ದೇವೆ. ಭಾಷಾನ್ವಯ ಪ್ರಾಂತ ರಚನೆಯ ವಿಷಯವನ್ನು ಘಟನಾ ಸಮಿತಿಯು ಮೊದಲನೆಯದಾಗಿ ತೆಗೆದುಕೊಳ್ಳಬೇಕೆಂದು ಡಾ. ಪಟ್ಟಾಭಿಯವರು ಅಧ್ಯಕ್ಷಸ್ಥಾನದಿಂದ ಅಪ್ಪಣೆಕೊಡಿಸಿದ್ದು ಅತ್ಯಂತ ನ್ಯಾಯ್ಯವಾಗಿದೆ. ಶ್ರೀ ದಿವಾಕರ ರಂಗನಾಥರಾಯರು ಮಂಡಿಸಿದ ಭಾಷಾನ್ವಯ ಪ್ರಾಂತ ರಚನೆಗೆ ಅವಶ್ಯವಿರುವ ಉಪಾಯ ಕೈಕೊಳ್ಳುವಂತೆ ಘಟನಾ ಸಮಿತಿಗೆ ಸಲಹೆ ಕೋರುವ ಗೊತ್ತುವಳಿ ಪರಿಷತ್ತಿನಲ್ಲಿ ಸ್ವೀಕೃತವಾಗಿ ಈ ದಿಸೆಯಲ್ಲಿ ಒಂದು ಹೆಜ್ಜೆ ಮುಂದಿಟ್ಟಿತು. ಪರಿಷತ್ತಿನವರು ಬರಿ ನಿರ್ಣಯ ಸ್ವೀಕರಿಸಿಬಿಡಲಿಲ್ಲ. ಆದರೆ ಅದನ್ನು ಕಾರ್ಯರೂಪದಲ್ಲಿ ತರುವುದಕ್ಕಾಗಿ ಡಾ. ಜಯಕರ ಪ್ರಭೃತಿಗಳ ಒಂದು ಕಾರ್ಯಸಮಿತಿಗುನ್ನೂ ನೇಮಿಸಿತು. ಭಾಷಾನ್ವಯ ಮತ್ತು ಸಾಂಸ್ಕೃತಿಕ ಪ್ರಾಂತಗಳನ್ನು ರಚಿಸಬೇಕೆಂಬ ಅಭಿಪ್ರಾಯವುಳ್ಳ ಬೇರೆ ಬೇರೆ ಪ್ರಾಂತಗಳ ಸುಮಾರು ೧೫೦ ಪ್ರತಿನಿಧಿಗಳು ಈ ಪರಿಷತ್ತಿನಲ್ಲಿ ಸಮ್ಮಿಲಿತರಾಗಿದ್ದರು. ಇದನ್ನು ನೋಡಿದರೆ ಈ ಪ್ರಶ್ನೆ ಎಷ್ಟು ಮಹತ್ವದ್ದಾಗಿದೆಂಬುದು ಎಲ್ಲರಿಗೂ ಗೊತ್ತಾಗುವದು. ಘಟನಾ ಸಮಿತಿಯ ಅಧ್ಯಕ್ಷರು ಈ ಪ್ರಶ್ನೆ ಘಟನಾ ಸಮಿತಿಯ ಅಧಿಕಾರ ಕ್ಷೇತ್ರದಲ್ಲಿ ಬರುವುದಿಲ್ಲ ಎಂದು ಅದನ್ನು ತಳ್ಳಿಬಿಡದೆ ಇದರ ಬಗ್ಗೆ ಆಯಾ ಪ್ರಾಂತಗಳ ಪ್ರತಿನಿಧಿಗಳು ಎಷ್ಟೊಂದು ಉತ್ಸುಕರಿರುವರೆಂಬುದನ್ನು ನೆನೆದು ಸಮಿತಿಯಲ್ಲಿ ಈ ವಿಷಯವನ್ನು ಅವಶ್ಯವಾಗಿ ಚರ್ಚೆಗೆ ತೆಗೆದುಕೊಳ್ಳಬೇಕೆಂದು ಅಗ್ರಹಪಡಿಸುತ್ತೇವೆ. ಪರಿಷತ್ತಿನಲ್ಲಿ ನೇಮಕವಾದ ಕಾರ್ಯಸಮಿತಿಯವರಾದರೂ ಈ ಬಗ್ಗೆ ಹೆಚ್ಚು ದಕ್ಷತೆ ವಹಿಸಿ ಉದ್ದಿಶ್ಯವನ್ನು ಸಾಧಿಸಿಕೊಳ್ಳಬೇಕೆಂದು ಸೂಚಿಸಬಯಸುತ್ತೇವೆ.

## ಅಭಿನಂದನೀಯ ವಿಜಯ

ಹಿಂದುಸ್ತಾನದಲ್ಲಿ ಈ ರೀತಿ ನಿರಾಶೆಯ ಛಾಯೆ ಪಸರಿಸಿದ್ದರೂ ಅಮೇರಿಕೆಯಲ್ಲಿ ಹಿಂದುಸ್ತಾನದ ಶಿಷ್ಟಮಂಡಳದವರು ಪಡೆದ ವಿಜಯವು ಅತ್ಯಂತ ಅಭಿನಂದನೀಯವಾಗಿದೆ. ದಕ್ಷಿಣ ಅಫ್ರಿಕೆಯ ಮುಖ್ಯ ಮಂತ್ರಿ ಜನರಲ್ ಸ್ಮಟ್ಸರ ವಿರುದ್ಧ ಭಾರತದ ಪ್ರತಿನಿಧಿಗಳು ಪಡೆದ ಯಶಸ್ಸು ಇತಿಹಾಸದಲ್ಲಿ ಚಿರಸ್ಮರಣೀಯವಾಗುಳಿಯುವದು. ಈವಿಷಯದ ವಿವರಗಳನ್ನು ಬೇರೆ ಕಡೆಗೆ ಕೊಟ್ಟಿದ್ದೇವೆ. ಬಿಳಿಯರ ವರ್ಣದ್ವೇಷವನ್ನು ಈ ರೀತಿ ಖಂಡಿಸಿ ಜಗತ್ತಿನಲ್ಲೆಲ್ಲ ಸಮಾನತೆಯ ಐಕ್ಯದ ತತ್ವಗಳನ್ನು ಪ್ರಸ್ಥಾಪಿತಮಾಡಿದ ಭಾರತದ ಶಿಷ್ಟಮಂಡಳದವರನ್ನು ಹಿಂದುಸ್ತಾನ ಸರಕಾರದ ಉಪಾಧ್ಯಕ್ಷರಾದ ಪಂಡಿತ ಜವಾಹರಲಾಲರು ಅಭಿನಂದಿಸಿದ್ದು ಯಥೋಚಿತವಾಗಿದೆ. ಹಿಂದುಸ್ತಾನದ ಈ ಬೇಡಿಕೆಗೆ ಬೆಂಬಲ ಕೊಟ್ಟ ರಾಷ್ಟ್ರಗಳನ್ನು ಅಭಿನಂದಿಸುವದು ಅಷ್ಟೇ ಅವಶ್ಯವಾಗಿದೆ. ಸಂಯುಕ್ತ ರಾಷ್ಟ್ರಸಭೆಯು ಈ ಗೊತ್ತುವಳಿಯನ್ನು ಸ್ವೀಕರಿಸಿ ಹಿಂದುಸ್ತಾನಕ್ಕೆ ಗೌರವ ಕೊಟ್ಟಿರುವದಲ್ಲದೆ ಮಾನವರ ಹಕ್ಕು ಬಾಧ್ಯತೆಗಳ ರಕ್ಷಕವೆಂಬ ಕೀರ್ತಿಯನ್ನು ಸಂಪಾದಿಸಿಕೊಂಡಿದೆ. ಸಂಯುಕ್ತ ರಾಷ್ಟ್ರ ಸಭೆ ಜಗತ್ತನ್ನೆದುರಿಸುತಿರುವ ಎಲ್ಲ ಸಮಸ್ಯೆಗಳನ್ನು ಇದೇ ಬಗೆಯಾಗಿ ಸೌಹಾರ್ದಭಾವದಿಂದ ಬಿಡಿಸಲು ಪ್ರಯತ್ನಿಸಿದರೆ ಇಂದಿನ ಅಶಾಂತಿಪರ್ವ ಎಷ್ಟೋ ಮಟ್ಟಿಗೆ ಕಡಮೆಯಾಗುವದು. ಆದರೆ ಹೀಗೆ ಮಾಡಬೇಕಾದರೆ ಆಯಾ ರಾಷ್ಟ್ರಗಳು ಸ್ವಾರ್ಥ ಮತ್ತು ಸಾಮ್ರಾಜ್ಯತ್ವದ ಹಂಬಲವನ್ನು ಮಾತ್ರ ಬಿಟ್ಟುಗೊಡಬೇಕಾಗುವದು.

# ಡಾಕ್ಟರ ರಾಜೇಂದ್ರಪ್ರಸಾದರು ಅಧ್ಯಕ್ಷರು

## ಸ್ವತಂತ್ರ ಸಾರ್ವಭೌಮ ಘಟನೆ ಸಿದ್ಧಪಡಿಸುವಾ

### ಘಟನಾ ಸಮಿತಿಯ ಕಾರ್ಯಕಲಾಪಗಳು

ಘಟನಾ ಸಮಿತಿಯ ಎರಡನೆಯ ದಿನದ ಕಾರ್ಯಕಲಾಪಗಳು ವಿಶೇಷ ಸ್ವಾರಸ್ಯಮಯವಾಗಿ ಸಾಗಿದುವು. ಅಧ್ಯಕ್ಷರನ್ನಾರಿಸುವ ಪದ್ಧತಿಗೆ ಸಂಬಂಧಿಸಿದ ಆಚಾರ್ಯ ಕೃಪಲಾನಿಯವರ ಗೊತ್ತುವಳಿ ಸ್ವೀಕೃತವಾಯಿತು. ಸಮಿತಿಯ ಕಾರ್ಯಕಲಾಪಗಳನ್ನು ನಡೆಸುವ ಬಗೆಗೆ ನಿಯಮಾವಲಿಯನ್ನು ಸಿದ್ಧಪಡಿಸಲು ೧೫ ಜನರ ಸಮಿತಿಯನ್ನು ನೇಮಿಸುವ ಎರಡನೆ ಗೊತ್ತುವಳಿ ವಿಶೇಷ ಚರ್ಚೆಯ ನಂತರ ಸ್ವೀಕೃತವಾಯಿತು. ಘಟನಾ ಸಮಿತಿಯ ಮತ್ತು ಅದರ ಅಂಗಗಳಾದ ಗುಂಪುಗಳ ಮತ್ತು ಇನ್ನಿತರ ಉಪಸಮಿತಿಗಳ ನಿಯಮಾವಲಿಯನ್ನು ತಯಾರಿಸುವ ಅಧಿಕಾರ ಈ ಹೊಸ ಸಮಿತಿಗೆ ಇರಬೇಕೆಂಬುದೆ ಸ್ವೀಕೃತವಾದ ಗೊತ್ತುವಳಿಯ ಆಶಯವಾಗಿದೆ. ಗುಂಪುಗಳು ಮತ್ತು ಉಪಸಮಿತಿಗಳು ಘಟನಾ ಸಮಿತಿಯ ಅಂಗಗಳೇ ಆಗಿದ್ದರಿಂದ ಈ ಉಪಸಮಿತಿಯು ಅವುಗಳ ನಿಯಮಾವಲಿಯನ್ನು ಸಿದ್ಧಪಡಿಸಲೂ ಅಧಿಕೃತವಿದೆಂಟುದು ಸ್ಪಷ್ಟವಿದ್ದುದರಿಂದ ಗೊತ್ತುವಳಿಯಲ್ಲಿ ಪ್ರತ್ಯೇಕವಾಗಿ ಆ ಬಗ್ಗೆ ನಿರ್ದೇಶಿಸಿಲ್ಲ. ಎಂದು ಕೃಪಲಾನಿಯವರು ಹೇಳಿದರು. ಹಲವರ ಭಾಷಣದ ನಂತರ ಆಚಾರ್ಯ ಕೃಪಲಾನಿಯವರು ಉತ್ತರ ಕೊಡುತ್ತ ತಮ್ಮ ಗೊತ್ತುವಳಿಯ ಸ್ಪಷ್ಟೀಕರಣ ಮಾಡಿದರು. ಅದರೂ ಗುಂಪುಗಳ ಮತ್ತು ಉಪಸಮಿತಿಗಳ ಎಂಬ ಶಬ್ದಗಳನ್ನು ಸೇರಿಸಬೇಕೆಂದು ಬಹುಸಂಖ್ಯಾಕ ಸದಸ್ಯರ ಅಭಿಪ್ರಾಯವಿದ್ದಂತೆ ತೋರುವುದರಿಂದ ಉಪಸೂಚನೆಯನ್ನು ಸ್ವೀಕರಿಸುತ್ತೇನೆ ಎಂದು ಹೇಳಿದರು ತಿದ್ದುಪಡಿ ಹೊಂದಿದ ಗೊತ್ತುವಳಿ ಸ್ವೀಕೃತವಾಯಿತು. ಡಾ. ಅಂಬೇಡಕರರೊಬ್ಬರೇ ಉಪಸೂಚನೆಗೆ ವಿರುದ್ಧ ಮತ ಕೊಟ್ಟರು.

#### ಕಾಯಂ ಅಧ್ಯಕ್ಷರ ಆಯ್ಕೆ ಪ್ರಶ್ನೆ

ಇದಕ್ಕೂ ಮೊದಲು ಅರ್ಧಗಂಟೆ ಘಟನಾ ಸಮಿತಿಯ ಕಾಯಂ ಅಧ್ಯಕ್ಷರನ್ನು ಆರಿಸುವ ಸಂಬಂಧದಲ್ಲಿ ಅನುಸರಿಸಬೇಕಾದ ಪದ್ಧತಿಯ ವಿಷಯಕ ದೀರ್ಘ ಗೊತ್ತುವಳಿ ಸ್ವೀಕೃತವಾಯಿತು.

#### ಡಾ. ರಾಜೇಂದ್ರ ಪ್ರಸಾದರ ಆಯ್ಕೆ

ಮೂರನೆಯ ದಿನ ಕಾಯಂ ಅಧ್ಯಕ್ಷರನ್ನು ಆರಿಸುವ ಕಾರ್ಯಕ್ರಮ ಜರಗಿತು. ಅಧ್ಯಕ್ಷಪದಕ್ಕೆ ಡಾ. ರಾಜೇಂದ್ರ ಪ್ರಸಾದರೊಬ್ಬರ ಹೆಸರೇ ಸೂಚಿಸಲ್ಪಟ್ಟಿದ್ದರಿಂದ ಅವರು ಅವಿರೋಧವಾಗಿ ಆರಿಸಿ ಬಂದರೆಂದು ತಾತ್ಪೂರ್ತಿಕ ಅಧ್ಯಕ್ಷ ಡಾ. ಸಚ್ಚಿದಾನಂದ ಸಿಂಹರು ಸಾರಿದರು. ಕೂಡಲೆ ಪ್ರಚಂಡ ಕರತಾಡನವಾಯಿತು.

ಡಾ. ಸಚ್ಚಿದಾನಂದ ಸಿಂಹರ ಬಿನ್ನಹದ ಮೇರೆಗೆ ಮೌಲಾನಾ ಅಬುಲ್‌ಕಲಂ ಅಝಾದ ಮತ್ತು ಆಚಾರ್ಯ ಕೃಪಲಾನಿಯವರು ರಾಜೇಂದ್ರರ ಒಂದೊಂದು ಕೈಹಿಡಿದು ವೇದಿಕೆಯ ವರೆಗೆ ಕರೆದುಕೊಂಡು ಹೋಗಿ ಅಧ್ಯಕ್ಷ ಪೀಠದ ಬಳಿ ಕುರ್ಚಿಯಲ್ಲಿ ಕುಳ್ಳಿರಿಸಿದರು. ಇನ್‌ಕಿಲಾಬ ಝಿಂದಾಬಾದ, ಜೈಹಿಂದ ಮೊದಲಾದ ಘೋಷಣೆಗಳು ಸಭಾಗೃಹದಲ್ಲೆಲ್ಲ ಪ್ರತಿಧ್ವನಿತವಾದವು.

#### ಸರ್ ರಾಧಾಕೃಷ್ಣನ್‌ರು

ಅನಂತರ ಸರ್ ಸರ್ವಪಲ್ಲಿ ರಾಧಾಕೃಷ್ಣನ್‌ರು ಡಾ. ರಾಜೇಂದ್ರ ಪ್ರಸಾದರನ್ನು ಅಭಿನಂದಿಸುತ್ತ ದೀರ್ಘ ಭಾಷಣ ಮಾಡಿದರು 'ಬ್ರಿಟಿಶ್ ಆರ್ಥಿಕ ರಾಜಕೀಯ, ಸೈನಿಕ, ಬಂಧನಗಳಿಲ್ಲದ ಸ್ವತಂತ್ರ ಭಾರತದ ಘಟನೆಯನ್ನು ಸಿದ್ಧಪಡಿಸಲು ಈ ಸಮಿತಿ ಕೂಡಿದೆ. ಇದರ ಕಾರ್ಯ ಯಶಸ್ವಿಯಾದರೆ ಜಗತ್ತಿನ ಇತಿಹಾಸದಲ್ಲಿಯೆ ದೊಡ್ಡ ಸಾಮ್ರಾಜ್ಯದ ಪಾಶದಿಂದ ಒಂದು ರಾಷ್ಟ್ರವು ಸ್ವಲ್ಪೂ ರಕ್ತಪಾತವಿಲ್ಲದೆ ಅಧಿಕಾರಸೂತ್ರಗಳನ್ನು ಕಸಿದುಕೊಂಡಂತಾಗುವದೆಂದು ಹೇಳಿ ಬ್ರಿಟಿಶರು ಹಿಂದುಸ್ತಾನಕ್ಕೆ ವ್ಯಾಪಾರಿಗಳೆಂದು ಬಂದು ಇಲ್ಲಿನ ಆಡಳಿತವನ್ನು ಹೇಗೆ ವಶಪಡಿಸಿಕೊಂಡರೆಂಬುದನ್ನು ಅವರು ವಿವರಿಸಿದರು. 'ನಾವು ಯಾವ ತತ್ವಗಳಿಗೂ ಚಿರಕಾಲ ಬದ್ಧರಾಗುವದಿಲ್ಲ. ನಾವು ಚಿರಕಾಲ ಬದ್ಧರಾಗುವದು ಕೇವಲ ನಮ್ಮ ಸ್ವಾರ್ಥದ ಹಿತಸಂಬಂಧಗಳಿಗೆ ಮಾತ್ರ' ಎಂದು ಲಾರ್ಡ ಫಾಮರಸನ್‌ರು ಹೇಳಿದ್ದನ್ನುಲ್ಲೇಖಿಸಿ ಸರ್ ಸಾಹೇಬರು ಬ್ರಿಟಿಶರು ಘಟನೆಗಳ ಒತ್ತಾಯದ ಮೂಲಕ ಅಧಿಕಾರತ್ಯಾಗಕ್ಕೆ ಸಿದ್ಧರಾಗಿರುವರೆಂದು ಹೇಳಿದರು. ಬ್ರಿಟಿಶ ಸರಕಾರದವರು ಮಂತ್ರಿತ್ರಯರ ಘೋಷಣೆಯ ವಿವರಣೆಯ ಬಗ್ಗೆ ಹೊರಡಿಸಿದ ಪ್ರಕಟನೆಯನ್ನು ನೋಡಿದರೆ ಅಧಿಕಾರತ್ಯಾಗಕ್ಕೆ ಅವರು ಸಿದ್ಧರಿಲ್ಲೆಂಬುದು ಸ್ಪಷ್ಟವಾಗುತ್ತದೆ. ಒಂದು ರಾಷ್ಟ್ರವಾಗಬೇಕಾದರೆ ಒಂದೇ ಜಾತಿಯ ಒಂದೇ ವಿಚಾರದ, ಒಂದೇ ವಂಶದ ಜನರೆ ವಾಸಿಸಬೇಕೆಂಬ ವಿಧಿಯಿಲ್ಲ. ನಮ್ಮ ರಾಷ್ಟ್ರದ ಜನತೆಯ ಜೀವನಝರಿ ಒಂದೇ ತೆರನಾಗಿ ಹರಿಯುತ್ತ ಬಂದಿದೆ. ಈ ನಾಡಿನ ಜನತೆಯ ಜೀವನ ನಾಡಿನ ಮಣ್ಣಿನೊಡನೆ ಸಮರಸವಾಗಿದೆ. ಈ ಸಮಿತಿಗೆ ಚುನಾಯಿತರಾಗಿ ಬಂದವರೂ ಆ ಸಂಸ್ಕೃತಿಯ ಪ್ರತಿನಿಧಿಗಳೆ ಇದ್ದುದಾದರೆ ನಾವೆಲ್ಲ ಗಂಡಾಂತರಗಳನ್ನು ದಾಟಬಹುದು. ಕಾಂಗ್ರೆಸ್ಸಿನ ೬೦ ವರ್ಷದಲ್ಲಿ ಈ ಸಮಿತಿ ಸೇರಿದ್ದು ಆಕಸ್ಮಿಕ ಘಟನೆಯಲ್ಲ. ಸ್ವಾತಂತ್ರ್ಯ ಸಾಧನೆಗಾಗಿ ಕಷ್ಟಪಟ್ಟವರನ್ನೆಲ್ಲ ಈ ಸಮಯದಲ್ಲಿ ಸ್ಮರಿಸದೆ ಗತ್ಯಂತರವಿಲ್ಲ. ಸಿಂಧು ನದಿಯ ಶಿವನವಿಗ್ರಹದಿಂದ ಇಂದು ಮಹಾತ್ಮಾ ಗಾಂಧಿಯವರೆಗೆ ನಮ್ಮ ಸಂಸ್ಕೃತಿಯಲ್ಲಿ ಸ್ನೇಹ ಸೌಹಾರ್ದ ಐಕ್ಯ ಇಳಿದು ಬಂದಿವೆ. ಈ ಗುಣಗಳು ಡಾ. ರಾಜೇಂದ್ರ ಪ್ರಸಾದರಲ್ಲಿದ್ದು ಅವರಿಂದ ಈ ಸಭೆಯ ಕಾರ್ಯಕಲಾಪಗಳಿಗೆ ಸ್ಫೂರ್ತಿ ದೊರೆಯಲಿ ಎಂದು ಮುಂತಾಗಿ ನುಡಿದರು.

#### ಸರ್ ಗೋಪಾಲಸ್ವಾಮಿ

ಅನಂತರ ಸರ್ ಗೋಪಾಲಸ್ವಾಮಿ ಅಯ್ಯಂಗಾರರು ಮಾತಾಡುತ್ತ, ಈ ಸಭೆ ಸಾರ್ವಭೌಮ ಅಧಿಕಾರದ್ದಿದ್ದು ಅದರ ಅಧಿಕಾರವನ್ನು ಕಡಿಮೆಮಾಡಲು ಇಲ್ಲವೆ ಕಸಿದುಕೊಳ್ಳಲು ಪ್ರಯತ್ನಿಸುವ ಎಲ್ಲ ಚಟುವಟಿಕೆಗಳನ್ನು ಹೊಡೆದು ಹಾಕುವ ಮಹತ್ವದ ಹೊಣೆ ಅದರ ಅಧ್ಯಕ್ಷ ಡಾ. ರಾಜೇಂದ್ರರ ಮೇಲೆ ಇಂದು ಬಿದ್ದಿದೆ. ಹಿಂದುಸ್ತಾನ ಸರಕಾರದವರು ಸಮಿತಿಯ ಸದಸ್ಯರನ್ನು ಇಲ್ಲಿ ಕೂಡುವಂತೆ ಮಾಡಿದ್ದರೂ ಇದರ ಮೂಲಭೂತ ಸಾರ್ವಭೌಮತ್ವದ ಸರ್ವಾಧಿಕಾರತ್ವದ ಅಧಿಕಾರಗಳಿಗೆ ವ್ಯತ್ಯಯಬರಲಾರದು. ರಾಜ್ಯಘಟನೆಯನ್ನು ತಯಾರಿಸುವ, ಘಟನೆಯನ್ನು ತಿದ್ದುವ ಮಂತ್ರಿಗಳ ಘೋಷಣೆಯಲ್ಲಿ ಹೇಳಿದ ಮಾತುಗಳನ್ನು ಹೆಚ್ಚಾಗಿ ಸೇರಿಸಿಕೊಳ್ಳುವ ಇಲ್ಲವೆ ಕಡಮೆ ಮಾಡುವ ಇಷ್ಟೇ ಅಲ್ಲ ಆ ಘೋಷಣೆಯಲ್ಲಿ ಮೂಲಭೂತವೆಂದು ಹೇಳಲಾದ ವಿಷಯುಗಳನ್ನು ಸಹ ಬದಲು ಮಾಡುವ ಅಧಿಕಾರ ಈ ಸಮಿತಿಗೆ ಇದೆಂಬುದು ಸ್ಪಷ್ಟವಿದೆ. ಯಾವ ಕಾನೂನಿನ ಅರ್ಥವಿವರಣೆಯ ಅಧಿಕಾರವೂ ಈ ಘಟನಾ ಸಮಿತಿಯ ಕಕ್ಷೆಯಲ್ಲಿ ಬರದೆ ಇರುವದಿಲ್ಲ. ಯಾವದೇ ಕೋರ್ಟು ಕಚೇರಿಗಳಿಗೆ ಆ ಅಧಿಕಾರವಿಲ್ಲ. ಕೇವಲ ಜಾತೀಯ ವಿಷಯುಗಳಲ್ಲಿ ಎರಡೂ ಜಾತಿಯವರು ಕೋರ್ಟಿನ ಸಲಹೆ ಪಡೆಯಬಯಸಿದರೆ ಮಾತ್ರ ಹಾಗೆ ಮಾಡಬಹುದು. ಇಲ್ಲದಿದ್ದರೆ ಇಲ್ಲ ಎಂದು ಅಯ್ಯಂಗಾರರು ಸ್ಪಷ್ಟ ಅಭಿಪ್ರಾಯ ಪಟ್ಟರು. ಬ್ರಿಟಿಶರು ಅಧಿಕಾರ ತ್ಯಾಗ ಮಾಡುವದಕ್ಕೆ ಒಪ್ಪಿದ್ದಾರೆ ಅದರ ರೀತಿಯನ್ನು ನಿರ್ಣಯಿಸುವ ಅಧಿಕಾರ ಸಾರ್ವಭೌಮಾಧಿಕಾರವುಳ್ಳ ಈ ಸಮಿತಿಗೆ ಸೇರಿದೆಂದು ಮುಂತಾಗಿ ಹೇಳಿದರು.

ಇನ್ನೂ ಹಲವರು ಮಾತಾಡಿದ ಬಳಿಕ ಡಾ. ಸಚ್ಚಿದಾನಂದಸಿಂಹರು ಕಾಯಂ ಅಧ್ಯಕ್ಷರಿಗೆ ಸ್ಥಾನವನ್ನು ಬಿಟ್ಟುಕೊಡುವ ಮುನ್ನ ಹೀಗೆಂದರು. ೧೯೦೨ ರಲ್ಲಿ ಡಾ. ರಾಜೇಂದ್ರರು ಮ್ಯಾಟ್ರಿಕ್ಯು ಪರೀಕ್ಷೆಯಲ್ಲಿ ಮೊದಲನೇ ನಂಬರನಲ್ಲಿ ಪಾಸಾದಾಗ ಅವರು ಕಾಂಗ್ರೆಸ್ಸಿನ ಅಧ್ಯಕ್ಷರಾಗುವರು ಇಲ್ಲವೆ ಹಾಯಕೋರ್ಟ ನ್ಯಾಯಾಧೀಶರಾಗುವರು ಎಂದು ನನ್ನ "ಹಿಂದುಸ್ತಾನ ರಿವ್ಯೂ" ಪತ್ರಿಕೆಯಲ್ಲಿ ನಾನು ಭವಿಷ್ಯ ನುಡಿದಿದ್ದೆ. ನನ್ನ ಭವಿಷ್ಯ ನಿಜವಾಯಿತು. ಅದರೂ ಅವರೆಂದೂ ನ್ಯಾಯಾಧೀಶರಾಗಲಿಲ್ಲ (ನಗು) ಆದರೆ ಘಟನಾ ಸಮಿತಿಯ ಶಾಶ್ವತ ಅಧ್ಯಕ್ಷ ಪೀಠದಂಥ ಹೆಚ್ಚಿನ ಗೌರವಸ್ಥಾನ ಅವರಿಗೆ ಸಿಕ್ಕಿತು. ಇಷ್ಟು ಹೇಳಿ ರಾಜೇಂದ್ರ ಪ್ರಸಾದರನ್ನು ಅಧ್ಯಕ್ಷ ಪೀಠದಲ್ಲಿ ಕುಳ್ಳಿರಿಸಿದರು. ಅನಂತರ ಆಚಾರ್ಯ ಕೃಪಲಾನಿಯವರು ಡಾ. ಸಚ್ಚಿದಾನಂದ ಸಿಂಹರವರನ್ನಭಿನಂದಿಸಿದರು.

#### ರಾಜೇಂದ್ರರ ಭಾಷಣ

ಅನಂತರ ಡಾ. ರಾಜೇಂದ್ರರು ಈ ಆಶಯದ ಭಾಷಣ ಮಾಡಿದರು. ಕೆಲ ನಿರ್ಬಂಧಗಳನ್ನು ಹೇರಿಕೊಂಡೇ ಈ ಘಟನಾ ಸಮಿತಿ ಜನ್ಮಿಸಿದೆ. ಆದರೆ ಈ ಸಭೆಯು ಸ್ವಯಂನಿರ್ಣಯಾಧಿಕಾರ ಸ್ವಯಂ ರಾಜ್ಯಾಧಿಕಾರ, ಸ್ವತಂತ್ರವಾದ ಅಧಿಕಾರವುಳ್ಳ ಸಮಿತಿಯಿದ್ದು ಇದರ ಕಾರ್ಯಕಲಾಪಗಳಲ್ಲಿ ಯಾರ ಕೈವಾಡವೂ . ನಡೆಯಲಾರದು ಈ ನಿರ್ಬಂಧಗಳನ್ನು ಕೂಡ ಹರಿದೊಗೆದು ಆದರ್ಶ ರಾಜ್ಯ ಘಟನೆಯನ್ನು ರಚಿಸಿ ಜಗತ್ತಿನ ಮುಂದೆ ನೀವು ಇಡುವಿರೆಂದು ನಂಬುತ್ತೇನೆ. ಮುಸ್ಲಿಂ ಲೀಗ ಸದಸ್ಯರು ಸಭೆಯಲ್ಲಿಲ್ಲದ್ದಕ್ಕಾಗಿ ವಿಷಾದಿಸುತ್ತೇನೆ. ಅವರು ಇನ್ನು ಕೆಲ ದಿನಗಳಲ್ಲಿ ಬಂದು ಘಟನೆಯನ್ನು ಸಿದ್ಧಪಡಿಸುವ ಕಾರ್ಯದಲ್ಲಿ ಸಹಕರಿಸುವರೆಂದು ನಂಬುತ್ತೇನೆ ಎಂದು ಮುಂತಾಗಿ ಅವರು ಹೇಳಿದರು.

# ಬ್ರಿಟಿಶ ಸರಕಾರ ಜಿನ್ನಾರಿಗೆ ಶರಣುಹೋಯಿತು!

## ಜಿನ್ನಾರ ಕೈಯಲ್ಲಿ ಎಲ್ಲ ಅಧಿಕಾರ !

### ಘಟನಾ ಸಮಿತಿ ಅರ್ಥವಿಲ್ಲದ್ದಾಗುತಿದೆ

ಲಂಡನ್ನಿನಲ್ಲಿ ನಡೆದ ಹಿಂದೀ ನಾಯಕರ ದುಂಡು ಮೇಜಿನ ಪರಿಷತ್ತು ವಿಫಲವಾ[ಗಿ] ಬ್ರಿಟಿಶ್ ಸರಕಾರದವರು ಮಂತ್ರಿತ್ರಯ ಯೋಜನೆಯ ಅರ್ಥದ ವಿಷಯದಲ್ಲಿ ಒಂದುಹೇಳಿ[ಕೆ] ಹೊರಡಿಸಿ ಹಿಂದೀ ರಾಜಕೀಯ ರಂಗದಲ್ಲಿ ಪುನಃ ಕೋಲಾಹಲವನ್ನುಂಟು ಮಾಡಿದ್ದಾರೆ.

ಗುಂಪುಗಳ ರಚನೆಯಿಂದ ಪ್ರಾರಂಭದಲ್ಲಿಯೇ ಹೊರಗುಳಿಯುವ ಹಕ್ಕು ಯಾ[ವ] ಪ್ರಾಂತಕ್ಕೂ ಇಲ್ಲವೆಂದು ಆ ಹೇಳಿಕೆಯ ಪಿಥಿತಾರ್ಥವಾಗಿರುವದರಿಂದ ಜಿನ್ನಾರ ಕೈಯಲ್ಲಿ ಪುನಃ ಹಿಂದೀ ಪ್ರಗತಿಯ ಮುಗದಾಣ ಕೊಟ್ಟಂತಾಗಿದೆ. ಇದರಿಂದ ಎಲ್ಲ ಪ್ರಗತಿಗಾಮಿಗಳಿಗೆ ತೀವ್ರ ನಿರಾಶೆಯುಂಟಾಗಿದೆ. ಪಂ. ಜವಾಹರಲಾಲ ಹಾಗು ಸರದಾರ ಬಲದೇವಸಿಂಗರು ಮರಳಿ ಬಂದಿದ್ದರೂ ಜಿನ್ನಾ ಸಾಹೇಬರೂ ಲಿಯಾಕತ ಅಲ್ಲಿಯವರೂ ಇನ್ನೂ ಲಂಡನ್ನಿನಲ್ಲಿ ಇದ್ದಾರೆ.

ಬ್ರಿಟಿಶ ಸರಕಾರದ ಪ್ರಕಟನೆಯ ಸಾರ ಹೀಗಿದೆ:

"ಗುಂಪುಗಳ ಸಭೆಯಲ್ಲಿ ಸಕಲ ನಿರ್ಣಯಗಳು, ಪ್ರತ್ಯೇಕ ಪದ್ಧತಿ ನಿರ್ಣಯಿಸಲ್ಪಟ್ಟ ಹೊರತು, ಸಾಮಾನ್ಯ ಬಹುಮತದಿಂದ ನಿರ್ಣಯಿಸಲ್ಪಡಬೇಕೆಂದು ಬ್ರಿಟಿಶ ಶಿಷ್ಟರು ಹೇಳುತ್ತ ಬಂದಿರುವರು. ಮುಸ್ಲಿಂ ಲೀಗಿನವರು ಈ ಅರ್ಥವನ್ನು ಒಪ್ಪಿದ್ದಾರೆ. ಆದರೆ ಕಾಂಗ್ರೆಸ್ಸು ಒಪ್ಪಿಲ್ಲ. ಬ್ರಿಟಿಶ ಘೋಷಣೆಯನ್ನು ಒಟ್ಟಾಗಿ ನೋಡಿದರೆ ಪ್ರಾಂತಗಳಿಗೆ ಗುಂಪಿನಲ್ಲಿ ಸೇರುವ ಹಾಗು ತಮ್ಮ ಘಟನೆಗಳನ್ನು ತಾವೇ ರಚಿಸಿಕೊಳ್ಳುವ ವಿಷಯದಲ್ಲಿ ಸ್ವಾತಂತ್ರ್ಯವಿದೆಯೆಂದು ಕಾಂಗ್ರೆಸ್ಸಿಗರು ಅರ್ಥ ಮಾಡಿದ್ದಾರೆ.

"ಹಿಂದೀಯರು ರಚಿಸಿದ ಘಟನೆಯನ್ನು ಬ್ರಿಟಿಶ ಸರಕಾರ ಪಾರ್ಲಿಮೆಂಟಿನ ಮನ್ನಣೆಗಾಗಿ ಒಪ್ಪಿಸುವಂತಾಗಬೇಕಾದರೆ ಬ್ರಿಟಿಶ ಘೋಷಣೆಯ ಈ ಭಾಗಕ್ಕೆ ಬ್ರಿಟಿಶ ಶಿಷ್ಟಮಂಡಲದವರು ಹೇಳಿದ ಈ ಅರ್ಥವನ್ನು ಘಟನಾಸಮಿತಿಯ ಎಲ್ಲ ಪಕ್ಷಸಂಗಡಗಳು ಒಪ್ಪಿಕೊಳ್ಳುವದವಶ್ಯ. ಈ ಅರ್ಥವಿವರಣೆಯನ್ನೊಪ್ಪಿಕೊಂಡು ಕಾಂಗ್ರೆಸ್ಸಿನವರು ಲೀಗಿನವರಿಗೆ ತಮ್ಮ ಧೋರಣೆಯನ್ನು ಪುನರ್ವಿಚಾರಿಸುವ ಮಾರ್ಗ ಮಾಡಿಕೊಡಬೇಕೆಂದು ಬ್ರಿಟಿಶ ಸರಕಾರದ ಒತ್ತಾಯದ ಸೂಚನೆ. ಹೀಗಿದ್ದೂ ಘಟನಾ ಸಮಿತಿಗೆ ಇದರ ವಿವರಣೆಗಾಗಿ ಫೆಡರಲ್ ಕೋರ್ಟಿಗೆ ಹೋಗಬೇಕೆಂದೆನಿಸಿದರೆ ಹೋಗಬಹುದು. ಹಾಗೆ ಹೋದರೆ ಕೋರ್ಟಿನ ನಿರ್ಣಯ ಹೊರಬೀಳುವ ವರೆಗೆ ಗುಂಪುಗಳ ಕಾರ್ಯಕಲಾಪ ತಡೆಯಬೇಕಾಗುವದು.

"ಉಭಯಸಮ್ಮತ ಕಾರ್ಯಕ್ರಮದಂತೆ ನಡೆದರೆ ಮಾತ್ರ ಘಟನಾ ಸಮಿತಿಗೆ ಯಶ ದೊರಕುವ ಲಕ್ಷಣವಿದೆ. ಹಿಂದೀ ಜನತೆಯ ಒಂದು ದೊಡ್ಡ ಪಂಗಡದ ಪ್ರತಿನಿಧಿಗಳಿಲ್ಲದೆ ರಾಜ್ಯಘಟನೆ ರಚಿತವಾದರೆ ಅದನ್ನು ಒಲ್ಲದ ಪ್ರದೇಶಗಳ ಮೇಲೆ ಹೇರುವ ವಿಚಾರ ಬ್ರಿಟಿಶ ಸರಕಾರಕ್ಕಿಲ್ಲ.

"ಮೇಲಿನ ಮುದ್ದೆಯಲ್ಲದೆ ಇನ್ನೂ ಹಲವು ವ್ಯಾಖ್ಯಾನ ವಿವಾದಗಳು ಮಂತ್ರಿತ್ರಯ ಘೋಷಣೆಯ ವಿಷಯದಲ್ಲಿ ಹುಟ್ಟಬಹುದು. ಅವುಗಳನ್ನು ಫೆಡರಲ್ ಕೋರ್ಟಿನ ನಿರ್ಣಯಕ್ಕೊಪ್ಪಿಸಿ ಅದರ ನಿರ್ಣಯದಂತೆ ಉಭಯತರು ನಡೆದುಕೊಳ್ಳಲೊಪ್ಪಬೇಕು."

#### ಜಿನ್ನಾರ ಕೈಲಿ ಕತ್ತಿ

ಈ ವಿವರಣೆಯಿಂದ ಕಾಂಗ್ರೆಸ್ಸನ್ನು ಸರಕಾರದವರು ಒಳ್ಳೆ ಇಕ್ಕಟ್ಟಿನಲ್ಲಿ ಕೆಡವಿದ್ದಾರೆ. ಕಾಂಗ್ರೆಸ್ಸು ಈ ಅರ್ಥಕ್ಕೊಪ್ಪಿಗೆ ಕೊಟ್ಟರೆ ಅದು ಅಸಾಮ, ಗಡಿನಾಡು, ಪಂಜಾಬಿ ಶೀಖರನ್ನು ಅವರ ಇಚ್ಛೆಯ ವಿರುದ್ಧ ಬ, ಕ, ಗುಂಪುಗಳಲ್ಲಿ ಸೇರಿಗೊಟ್ಟು ಅವರ ಸಹಾನುಭೂತಿ ಕಳಕೊಳ್ಳಬೇಕಾಗುವದು. ಏಕೆಂದರೆ ಗುಂಪುಗಳಲ್ಲಿ ಮತದಾನ ಪದ್ಧತಿ, ಪ್ರಾಂತಿಕ ಪಂಗಡಗಳಲ್ಲಲ್ಲ, ಒಟ್ಟೂ ಸಾಮಾನ್ಯ ಬಹುಮತದಿಂದ, ಎಂದು ಸರಕಾರ ನಿರ್ಣಯಿಸಿದ್ದರಿಂದ, ಗಡಿನಾಡ, ಅಸಾಮ ಇವೆರಡಕ್ಕೂ ಇರುವ ಪ್ರಾತಿನಿಧ್ಯ ಕಡಿಮೆಯಾಗಿರುವ ಕಾರಣ ಅವುಗಳ ವಿರೋಧ ನಿರರ್ಥಕವಾಗುವದು.

ಇನ್ನು ಪ್ರಕರಣದ ರೂಪ ಕೆಟ್ಟಿದ್ದರೂ ಫೆಡರಲ್ ಕೋರ್ಟಿಗೆ ಹೋದೆವೆಂದಿಟ್ಟುಕೊಳ್ಳೋಣ ಮತ್ತು ಕಾಂಗ್ರೆಸ್ ಅರ್ಥವೇ ಸರಿಯೆಂಬ ತೀರ್ಪು ಹೊರಟಿತೆಂದೂ ಇಟ್ಟುಕೊಳ್ಳೋಣ. ಆ ತೀರ್ಪನ್ನು ಮುಸ್ಲಿಂಲೀಗು ಅಂಗೀಕರಿಸಬೇಕೆಂದು ಯಾವ ನಿಯಮವೂ ಇಲ್ಲ. ಸರಕಾರದ ಒತ್ತಾಯವಿಲ್ಲದೆ ಅದು ಒಪ್ಪುವದಿಲ್ಲವೆಂಬಲ್ಲಿ ಯಾವ ಸಂದೇಹವೂ ಇಲ್ಲ. ಅಂದಮೇಲೆ ನ್ಯಾಯಸ್ಥಾನಕ್ಕೆ ಹೋಗಿ ಫಲವೇನು ?

ಇಷ್ಟು ಮಾತ್ರವೆ ? ಫೆಡರಲ್ ಕೋರ್ಟಿನ ಈ ವಿಷಯಕವಾದ ನಿರ್ಣಯವನ್ನು ಅಂಗೀಕರಿಸಬೇಕೆಂದು ಲೀಗಿನ ಮೇಲೆ ಯಾವ ಬಂಧನವೂ ಇಲ್ಲದಿದ್ದರೂ ಕಾಂಗ್ರೆಸ್ಸು ಇದನ್ನೊಪ್ಪಿಕೊಂಡು ಲೀಗಿಗೆ ಒಳಬರಲು ಅವಕಾಶ ಮಾಡಿಕೊಟ್ಟರೂ ಲೀಗು ತನ್ನ ಬಹಿಷ್ಕಾರ ನಿರ್ಣಯವನ್ನು ಬದಲಿಸಿ ಘಟನಾ ಸಮಿತಿಗೆ ಹಾಜರಾಗಬೇಕೆಂದು ಎಲ್ಲಿ ಹೇಳಿದೆ ? ಯಾವುದೊಂದು ಪಂಗಡದ ಪ್ರತಿನಿಧಿಗಳಿಲ್ಲದೆ ಸಿದ್ಧಗೊಳಿಸಿದ ಘಟನೆಯನ್ನು ಒಲ್ಲದ ಭಾಗಗಳ ಮೇಲೆ ಹೇರಲಾಗುವದಿಲ್ಲವೆಂದು ಸ್ಪಷ್ಟಗೊಳಿಸಿದ್ದರಿಂದ ತಾನು ಹೊರಗುಳಿದರೆ ಯಾವ ಘಟನೆಯೂ ಈಶಾನ್ಯ ವಾಯವ್ಯ ಭಾಗಗಳಲ್ಲಿ ಜಾರಿಗೆ ಬರಲಾರದೆಂದು ಧೈರ್ಯಗೊಂಡು ಇನ್ನಷ್ಟು ಸವಲತ್ತಿಗಾಗಿ ಹೊರಗುಳಿದು ಬೆದರಿಕೆ ಹಾಕಲು ಲೀಗಿಗೆ ಅನುಕೂಲವಾಗಲಿಲ್ಲವೆ? ಇನ್ನು "ಒಲ್ಲದ ಭಾಗಗಳೆಂದರೆ ಯಾವುವು ? ಅಸಾಮ

—೧೪ ನೇ ಪುಟಕ್ಕೆ



# ಅಂತರ್ ರಾಷ್ಟ್ರೀಯ

#### ಯುಕ್ತರಾಷ್ಟ್ರ ನಿರ್ಣಯ

ಡಿಸೆಂಬರ ೮ ಹಿಂದುಸ್ತಾನಕ್ಕೆ, ಜಗತ್ತಿನಲ್ಲಿರುವ ಹಿಂದೀಯರಿಗೆ ಮತ್ತು ಬಿಳಿಯರಲ್ಲದ ಜನರಿಗೆಲ್ಲ ಒಂದು ಮಹಾದಿನವಾಗಿತ್ತು. ಮಾತ್ರವಲ್ಲ, ಯುಕ್ತರಾಷ್ಟ್ರ ಸಂಸ್ಥೆಗೂ ಅದೊಂದು ಮಹಾದಿನವೆನ್ನಬೇಕು. ಅಂದು ಯುಕ್ತರಾಷ್ಟ್ರ ಸಂಸ್ಥೆಯ ಮಹಾಸಭೆಯಲ್ಲಿ ದಕ್ಷಿಣ ಆಫ್ರಿಕಾ ಹಿಂದೀಯರ ಪ್ರಶ್ನೆಯನ್ನು ಹಿಂದುಸ್ತಾನ—ದಕ್ಷಿಣ ಆಫ್ರಿಕೆಗಳು ಪರಸ್ಪರ ಚರ್ಚಿಸಿ ಯೋಗ್ಯಕ್ರಮ ತೆಗೆದುಕೊಂಡು ಮುಂದಿನ ಯುಕ್ತರಾಷ್ಟ್ರ ಅಧಿವೇಶನಕ್ಕೆ ವರದಿ ಮಾಡಬೇಕೆಂಬ ಫ್ರೆಂಚ—ಮೆಕ್ಸಿಕನ್ ಗೊತ್ತುವಳಿ ಪ್ರಚಂಡ ಬಹುಮತದಿಂದ (೩೨:೧೫) ಸ್ವೀಕೃತವಾಯಿತು. ಹಾಗು ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ಹೇಳಿದಂತೆ "ಯುಕ್ತ ರಾಷ್ಟ್ರ ಸಂಸ್ಥೆಯಲ್ಲಿ ಹಿಂದೀಯರಿಟ್ಟ ನೆಚ್ಚಿಕೆ ಸಾರ್ಥಕವಾಯಿತು."

ಈ ವಿಷಯವನ್ನು ಅಂತರ್‌ರಾಷ್ಟ್ರೀಯ ನ್ಯಾಯಸ್ಥಾನಕ್ಕೊಪ್ಪಿಸಬೇಕೆಂಬ ಜನರಲ್ ಸ್ಮಟ್ಸರ ಉಪಸೂಚನೆ ೩೧:೨೧ ಮತದಿಂದ ನಿರಾಕರಿಸಲ್ಪಟ್ಟಿತು.

ಹೀಗೆ ವಿಷಯವನ್ನು "ಅಂತರಿಕ ಪ್ರಶ್ನೆ" ಯೆಂದು ಮೊದಲು ಸಾಧಿಸಿ, ಆ ಮೇಲೆ ಅದನ್ನು "ಕಾಯದೆ ಪ್ರಶ್ನೆ"ಯಾಗಿ ಮಾಡಿಕೊಂಡು ಅಂತರ್‌ರಾಷ್ಟ್ರೀಯ ನ್ಯಾಯಸ್ಥಾನಕ್ಕೆ ಒಯ್ದು ನೆನೆಗುದಿಗೆ ಹಾಕಿ ಎತ್ತಿ ಒಗೆಯಬೇಕೆಂಬ ದಕ್ಷಿಣ ಆಫ್ರಿಕಾ ಮುಖ್ಯಮಂತ್ರಿ ಜನರಲ್ ಸ್ಮಟ್ಸರ ಪ್ರಯತ್ನ ವ್ಯರ್ಥವಾಗಿ ಯುಕ್ತರಾಷ್ಟ್ರ ಸಂಸ್ಥೆಯ ಮೇಲೆ ಅವರದೇನಾದರೂ ಲೇಶಮಾತ್ರ ಗೌರವ ವಿದ್ದರೆ ಹಿಂದೀಯರ ವಿರುದ್ಧ, ಅವರು ಮಾಡಿರುವ ವರ್ಣದ್ವೇಷ ಕಾಯದೆಯನ್ನು ರದ್ದುಗೊಳಿಸುವ ವಿಷಯದಲ್ಲಿ ಹಿಂದುಸ್ತಾನ ಸರಕಾರದೊಡನೆ ಮಾತುಕತೆ ಪ್ರಾರಂಭಿಸಬೇಕಾಗಿ ಬರುವದು.

ಜಗತ್ತಿನ ಎರಡು ಅತಿ ಪ್ರಬಲ ರಾಷ್ಟ್ರಗಳ ಪ್ರತಿನಿಧಿಗಳು—ಬ್ರಿಟನ್ ಮತ್ತು ಅಮೇರಿಕಾ—ಜನರಲ್ ಸ್ಮಟ್ಸರ ಪಕ್ಷ ಹಿಡಿದು ವಾದಿಸಿದ್ದವೆಂಬದನ್ನು ನೆನಸಿಕೊಂಡರೆ ಹಿಂದೀಯರಿಗೆ ದೊರೆತ ಈ ವಿಜಯದ ಮಹತ್ವ ಗೊತ್ತಾಗುವದು. ಬ್ರಿಟಿಶ ಪ್ರತಿನಿಧಿಗಳಾದ ಸರ್ ಹಾರ್ಟ್ಲೀ ಶಾಕ್ರಾಸರು ಹಿಂದೀಯರಲ್ಲಿ ಸ್ವದೇಶದಲ್ಲಿರುವ ಅನೈಕಮತ್ಯದ ಭೂತವನ್ನು ಕೂಡ ಎತ್ತಿ ತೋರಿಸಿ ಯುಕ್ತರಾಷ್ಟ್ರ ಸದಸ್ಯರ ಮನದಲ್ಲಿ ವಿಷ ಬೆರೆಸಲು ಹಿಂಜರಿಯಲಿಲ್ಲ. ಹಿಂದೀಯರ ಬೆಂಬಲ ಪಡೆದ ಫ್ರೆಂಚ—ಮೆಕ್ಸಿಕನ್ ಗೊತ್ತುವಳಿ ಮಹಾಸಭೆಯಲ್ಲಿ ಪಾಸಾಗುವದೆಂಬ ಧೈರ್ಯವಿದ್ದಿಲ್ಲ. ಏಕೆಂದರೆ ಎರಡು—ಮೂರಾಂಶ ಬಹುಮತ ಪಡೆಯದ ಗೊತ್ತುವಳಿ ಸದಸ್ಯರ ಮೇಲೆ ಬಂಧಕವಾಗುವದಿಲ್ಲ. ರಾಜಕೀಯ ಕಾಯದೆ ಸಮಿತಿಗಳಲ್ಲಿ ಕೂಡ ಅದಕ್ಕೆ ೨೪: ೧೯ ಮತಗಳು ಮಾತ್ರ ದೊರೆತಿದ್ದವು. ನಿಜವಾಗಿ ತುರ್ಕಿ, ಸ್ವೀಡನ್, ಡೆನ್ಮಾರ್ಕಗಳು ತಟಸ್ಥ ಉಳಿಯುವ ಬದಲು ವಿರುದ್ಧ ಮತವಿತ್ತಿದ್ದರೆ, ಎರಡು-ಮೂರಾಂಶ ಬಹುಮತ ದೊರೆಯದೆ ಗೊತ್ತುವಳಿ ವ್ಯರ್ಥವಾಗಿ ಬಿಡುತಿತ್ತು. ಈ ವಿಷಯದಲ್ಲಿ ಯುಕ್ತರಾಷ್ಟ್ರ ಸಭೆಯ ಹಿಂದೀ ಪ್ರತಿನಿಧಿಗಳ ಪ್ರಯತ್ನಗಳಿಗೆಷ್ಟೊ ಅಷ್ಟೇ ನ್ಯಾಯದ ಪಕ್ಷದಲ್ಲಿ ಮತವಿತ್ತ ರಾಷ್ಟ್ರಗಳಿಗೂ ನಮ್ಮ ಧನ್ಯವಾದ ಸಲ್ಲತಕ್ಕದ್ದಿದೆ. ಮುಖ್ಯವಾಗಿ ಸೋವಿಯಟ್ ಬಣ, ಫಿಲಿಪಾಯಿನ, ಚೀನ, ಅರಬ ಬಣಗಳಿಗೆ ನಾವು ಋಣಿಗಳು.

ಹಿಂದೀ ಪ್ರತಿನಿಧಿಗಳ ಮುಂದಾಳಾದ ಶ್ರೀಮತಿ ವಿಜಯಲಕ್ಷ್ಮಿಯವರ ಕೊನೆಯ ಭಾಷಣ ಗೌರವಪೂರ್ಣವೂ ಸಂಕ್ಷಿಪ್ತವೂ ಆಗಿತ್ತು. ಸರ್ ಹಾರ್ಟ್ಲೀಯವರು ಹಿಂದೀಯರ ಒಳ ಜಗಳಗಳ ಮಾತೆತ್ತಿದ್ದನ್ನು ಪ್ರಸ್ತಾವಿಸಿ ಬ್ರಿಟಿಶರಿಂದಲೇ ಬೆಳೆಸಲ್ಪಟ್ಟ ಈ ಒಳ ಜಗಳಗಳನ್ನು ಅವರು ಉಲ್ಲೇಖಿಸಿದ್ದರಲ್ಲಿ ಸಭ್ಯತೆಯ ಅಭಾವ ಕಾಣಬರುತ್ತದೆಂದು ಅವರ ಮಾತನ್ನು ಅವರ ಸೆರಗಿಗೇ ಗಂಟಿಕ್ಕಿದರು. ಮತ್ತು ಮತದಾನದ ಪರಿಣಾಮವೆಂತೇ ಆಗಲಿ, ಈ ಪ್ರಶ್ನೆಗೆ ಕಿವಿಗೊಟ್ಟು ಸಭೆ ಈಗಾಗಲೆ ಬಹಳ ಉದಾತ್ತ ಕಾರ್ಯ ಮಾಡಿದೆಯೆಂದೂ ನ್ಯಾಯ, ಸತ್ಯಗಳಿಗೂ ದಲಿತ ಜನರಿಗೂ ಎಲ್ಲ ದೇಶಗಳಲ್ಲಿ ಬೆಂಬಲಿಗರಿದ್ದಾರೆಂದು ಸಿದ್ಧವಾಯಿತೆಂದೂ ಹೇಳಿದರು.

ಮತದಾನದ ಪರಿಣಾಮ ಹೊರಬಿದ್ದೊಡನೆ ಹಿಂದೀ ಪ್ರತಿನಿಧಿಗಳ ಗುಂಪು ಅನುಮೋದಕರಿಂದ ಮುತ್ತಲ್ಪಟ್ಟಿತು. ದ. ಆಫ್ರಿಕಾ ಗುಂಪಿಗೆ ಸಾಂತ್ವನೆಯೀಯಲು ಒಬ್ಬರುಕೂಡ ಕದಲಲಿಲ್ಲ.

ನೈಋತ್ಯ ಆಫ್ರಿಕೆಯನ್ನು ದಕ್ಷಿಣ ಆಫ್ರಿಕೆಯಲ್ಲಿ ಸೇರಿಸಬಾರದೆಂಬ ಗೊತ್ತುವಳಿ ಪಾಸಾಗಿ ಜ. ಸ್ಮಟ್ಸರಿಗೆ ಮತ್ತೊಂದು ಸೋಲು ಪ್ರಾಪ್ತವಾಯಿತು.

#### ಪ್ರತಿಕ್ರಿಯೆ

ಈ ಗೊತ್ತುವಳಿಯನ್ನು ಅಂಗೀಕರಿಸುವ ಮೂಲಕ ಯುಕ್ತರಾಷ್ಟ್ರ ಸಭೆ ಜಗತ್ತಿನಲ್ಲಿ ಬಿಳಿಯರಲ್ಲದವರೇ ಹೆಚ್ಚು ಜನರಿರುವರೆಂದೂ ವರ್ಣದ್ವೇಷದ ಪ್ರಶ್ನೆಯನ್ನು ಆಂತರಿಕವೆಂದು ಅಸಡ್ಡೆ ಮಾಡಲು ತಾನು ಸಿದ್ಧವಿಲ್ಲೆಂದೂ ತೋರಿಸಿಕೊಟ್ಟಂತಾಗಿದೆ. ಅದರಿಂದ ಜಗತ್ತಿನಲ್ಲೆಲ್ಲ ಬಿಳಿಯರಲ್ಲದ ಜನತೆಯಲ್ಲಿರುವ ಬಾಂಧವ್ಯದ ಬಂಧನ ತಕ್ಕಮಟ್ಟಿಗೆ ಬಿಗಿಯಾದಂತಾಗಿದೆ. ಮುಖ್ಯವಾಗಿ ದಕ್ಷಿಣ ಆಫ್ರಿಕೆಯಲ್ಲಿ ಇನ್ನೂ "ಮೂಕ" ಯಾತನೆಯನ್ನು ಅನುಭವಿಸುತಿರುವ ೮೦ ಲಕ್ಷ ನಿಗ್ರೋಗಳ ಮುಂದಾಳ್ತನ ಹಿಂದೀಯರಿಗೆ ದೊರೆಯುವ ಲಕ್ಷಣವಿದೆ. ಗೊತ್ತುವಳಿ ಪಾಸಾದ ಸುದ್ದಿ ಬಂದೊಡನೆ ಜೊಹಾನ್ಸಬರ್ಗದಲ್ಲಿಯೂ ದರ್ಬಾನದಲ್ಲಿಯೂ ಹಿಂದೀಯರ ಪ್ರಚಂಡ ಸಭೆಗಳಾದವು; ಹಾಗು ಸ್ಮಟ್ಸರು ಈ ವರ್ಣದ್ವೇಷ ಕಾಯದೆಗಳನ್ನು ಹಿಂತೆಗೆದುಕೊಳ್ಳುವ ವರೆಗೆ ಸತ್ಯಾಗ್ರಹವನ್ನು ಯಥಾಪ್ರಕಾರ ಸಾಗಿಸುವ ನಿರ್ಣಯವಾಯಿತು. ಬಿಳಿಯರಲ್ಲದವರ ಮಾನವೀ ಹಕ್ಕುಗಳನ್ನು ರಕ್ಷಿಸಲು ಹೋರಾಟ ನಡೆಸುವಗೋಸುಗ ದೊಡ್ಡ ನಿಧಿಯೊಂದನ್ನು ಶೇಖರಿಸುವ ಪ್ರಯತ್ನವೂ ಆರಂಭವಾಗಿದೆ.

ಯುಕ್ತರಾಷ್ಟ್ರ ನಿರ್ಣಯಕ್ಕೆ ದಕ್ಷಿಣ ಆಫ್ರಿಕೆಯ ವರ್ಣದ್ವೇಷಮತ್ತ ಸರಕಾರದ ಪ್ರತಿಕ್ರಿಯೆಯೇನಾಗುವದೋ ಇನ್ನೂ ಗೊತ್ತಿಲ್ಲ. ಸ್ಮಟ್ಸರು ಮರಳಿದ ನಂತರವೇ ಅದರ ನಿರ್ಣಯವಾಗುವದು. ಆದರೆ ಬಿಳಿಯರು ತಮ್ಮ ವರ್ಣದ್ವೇಷವನ್ನು ಕಡಿಮೆ ಮಾಡುವ ಲಕ್ಷಣವೇನೂ ಗೋಚರವಾಗುವದಿಲ್ಲ. ಕೇಪ್‌ಟೌನಿನ ಬಿಳಿಯ ಪೋಲೀಸರು ಪೋಲೀಸ ಪಡೆಯಲ್ಲಿ "ಬಿಳಿಯರಲ್ಲದವರೊಡನೆ ಬಿಳಿಯರು ಸಮಾನರಾಗಿ ಕೆಲಸ ಮಾಡಬೇಕಾಗಿ ಬಂದುದನ್ನು" ಪ್ರತಿಭಟಿಸಿದ್ದಾರೆ. ಹಾಗೆಯೆ ದಕ್ಷಿಣ ಆಫ್ರಿಕಾ ಏರವೇಸ ಕಂಪನಿಯ ವಿಮಾನಗಳಲ್ಲಿ ಬಿಳಿಯರೂ ಬಿಳಿಯರಲ್ಲದವರೂ ಒಟ್ಟಾಗಿ ಪ್ರಯಾಣ ಮಾಡಬೇಕಾಗುವದನ್ನು ಪ್ರತಿಭಟಿಸಬೇಕೆಂದು ಟ್ರಾನ್ಸವಾಲ ಮ್ಯುನಿಸಿಪಲ್ ಸಂಘಕ್ಕೆ ಗೊತ್ತುವಳಿ ಬಂದಿದೆ.

#### ವಿದೇಶ ಮಂತ್ರಿಗಳ ಸಭೆ

ಸಾಮ್ಯವಾದಿಯಲ್ಲದ ಜಗತ್ತಿನ ಕಡೆಗೆ ಬಹಳ ನಿಷ್ಠುರವಾಗಿದ್ದ ಸಾಮ್ಯವಾದಿ ರಶಿಯಾದ ಧೋರಣೆ ಇದೀಗ ಕೆಲ ವಾರಗಳಿಂದ ಅಕಸ್ಮಾತ್ತಾಗಿ ಮಿದುವಾಗಿದ್ದರಿಂದ ಯುಕ್ತರಾಷ್ಟ್ರ ಸಭೆಯ ಸಂಗಡಲೇ ನಡೆದಿದ್ದ ವಿದೇಶ ಮಂತ್ರಿಗಳ ಸಭೆಯ ಕಾರ್ಯಕಲಾಪಗಳು ಅಪಾತತಃ ಬಹಳ ಶೀಘ್ರವಾಗಿಯೆ ಮುಗಿದವೆನ್ನಬೇಕು. ಹಿಂದಿನ ಶತ್ರುರಾಷ್ಟ್ರಗಳಾದ ಇಟಲಿ, ರುಮೇನಿಯಾ, ಬಲ್ಗೇರಿಯಾ, ಹಂಗೇರಿ, ಫಿನ್ಲಂಡುಗಳ ಶಾಂತಿ ಒಪ್ಪಂದಗಳ ಕೊನೆಯ ಒಕ್ಕಣೆಗಳು ಪೂರ್ತಿಯಾಗಿ ಸಿದ್ಧವಾದುವಲ್ಲದೆ, ಟ್ರಿಸ್ಟೆಯ ಅಂತರ್‌ರಾಷ್ಟ್ರೀಯ ಆಡಳಿತದ ಸನದು ಕೂಡ ಪೂರ್ತಿಯಾಗಿದೆ. ಎಲ್ಲದರಲ್ಲಿಯೂ ರಶಿಯನ್ ವಿದೇಶಮಂತ್ರಿ ಮೊಲಟೋವರು ಬಹಳ ಔದಾರ್ಯ ತೋರಿಸಿದರು. ಡ್ಯಾನೂಬ ನದಿಯಲ್ಲಿ ಎಲ್ಲ ರಾಷ್ಟ್ರಗಳಿಗೂ ಮುಕ್ತದ್ವಾರವಿರಬೇಕೋ ಬೇಡವೊ ಎಂಬ ಬಹಳ ಮಹತ್ವದ ಪ್ರಶ್ನೆ ಕೂಡ ತೀರ್ಮಾನವಾಗಿ ಮುಕ್ತದ್ವಾರ ಧೋರಣೆಗೆ ರಶಿಯಾ ಒಪ್ಪಿಗೆ ಕೊಟ್ಟಿದೆ. ಪರಿಹಾರ ಧನದ ಪ್ರಶ್ನೆಯೂ ಬಗೆಹರಿಯಿತು. ಇನ್ನು ಜರ್ಮನಿಯ ಶಾಂತಿ ಒಡಂಬಡಿಕೆಯ ಪ್ರಶ್ನೆಯ ತೀರ್ಮಾನಕ್ಕೆ ವಿದೇಶ ಮಂತ್ರಿ ಸಭೆ ಮಾರ್ಚ ೧೦ ಕ್ಕೆ ಮಾಸ್ಕೋದಲ್ಲಿ ಸೇರಬೇಕೆಂದು ಕೂಡ ನಿರ್ಣಯವಾಯಿತು.

ಯುಕ್ತರಾಷ್ಟ್ರ ಸಂಘದಲ್ಲಿಯೂ ರಶಿಯನ್ ರೀತಿ ನೀತಿ ಬಹಳ ಮಿದುವಾಗಿ ಬಿಟ್ಟಿದೆ. ನಿಶ್ಶಸ್ತ್ರೀಕರಣದ ಪ್ರಶ್ನೆಯನ್ನು ನಿರ್ಣಯಿಸುವಲ್ಲಿ ತನಗಿರುವ ಪ್ರತಿಬಂಧಾಧಿಕಾರವನ್ನು ಉಪಯೋಗಿಸದಿರಲು ರಶಿಯಾ ಒಪ್ಪಿದೆ.

ಬಹುಶಃ, ರಶಿಯನ್ ನಾಯಕರು ಬಂಡವಳವಾದಿ ಜಗತ್ತಿನ ಭಯವನ್ನು ಬಿಟ್ಟು ನೇರವಾದ ಹಾದಿಯಿಂದ ಹೋರಾಡಲು ನಿರ್ಣಯಿಸಿರಬೇಕು.

#### ಸ್ಟಾಲಿನ್ನರ ಅಸ್ವಸ್ಥತೆ ?

ಸ್ಟಾಲಿನ್ನರು ವಿಶ್ರಾಂತಿ ಧಾಮದಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾರೆಂದು ಕಳೆದವಾರ ರಶಿಯಾದಿಂದ ಸುದ್ದಿ ಬಂದೊಡನೆ ಊಹಾಪೋಹಕರಿಗೆ ಹೊಸ ವಿಷಯ ದೊರಕಿತು. ಸ್ಟಾಲಿನ್ನರು ಎದೆನೋವಿನಿಂದ ಬಳಲುತಿದ್ದು ಈಗ ಗುಣಹೊಂದಿ ಪೂರ್ಣ ವಿಶ್ರಾಂತಿ ಪಡೆಯುತ್ತಿರುವರೆಂದೂ ಕೆಲವರು ಕಲ್ಪಿಸಿದರು. ಅವರು ಕೇವಲ ರಜಾ ತೆಗೆದುಕೊಂಡಿರುವರೆಂಬ ಸೋವಿಯೆಟ್ ಅಧಿಕೃತ ಪ್ರಕಟನೆಯನ್ನು ನಂಬುವದು ಕಠಿಣವೆನಿಸಿತು. ಕೆಲವರಂತೂ ಸ್ಟಾಲಿನ್ನರು ಸತ್ತೇ ಹೋಗಿರುವರೆಂದು ಕೂಡ ತರ್ಕಿಸಿದರೋ ಏನೋ. ಹಿಂದೆ ಲೆನಿನ್ನರ ಕೊನೆಗಾಲದ ಅಸ್ವಸ್ಥತೆಯ ಸುದ್ದಿಯನ್ನು ಹೇಗೆ ತೀವ್ರ ನಿಯಂತ್ರಣಕ್ಕೆ ಒಳಪಡಿಸಲಾಗಿತ್ತೆಂಬುದನ್ನು ಅವರು ನೆನೆದುಕೊಂಡಿದ್ದರೋ ಏನೋ. ಲೆನಿನ್ನರು ಸತ್ತರೆ ಆ ಸುದ್ದಿ ಹೊರಜಗತ್ತಿಗೆ ಬೇಗನೆ ಹಬ್ಬದಂತೆ ಸರಕಾರ ನೋಡಿಕೊಳ್ಳುವದೆಂದು ಬಗೆದು, ಒಂದು ಬ್ರಿಟಿಶ ಪತ್ರಿಕೆಯ ಮಾಸ್ಕೋ ಸುದ್ದಿಗಾರ ಉದ್ದೇಶಪೂರ್ವಕ ಲಂಡನ್ನಿಗೆ ಬಂದು "ಲೆನಿನ್ನರು ಸತ್ತೊಡನೆ ನಾನು ೧೦೦ ಪೌಂಡ ಕಳಿಸಿರೆಂದು ತಂತಿ ಕಳಿಸುವೆ. ಅದು ಸುದ್ದಿ ನಿಯಂತ್ರಣದಿಂದ ಪಾರಾಗಿ ಬರುವದರಲ್ಲಿ ಸಂಶಯವಿಲ್ಲ. ಅದು ಬಂದೊಡನೆ ಲೆನಿನ್ನರು ಸತ್ತಿದ್ದಾರೆಂದು ಪ್ರಕಟಿಸಿರಿ" ಎಂಬುದಾಗಿ ತನ್ನ ಸಂಪಾದಕನಿಗೆ ತಿಳಿಸಿ ಹೋದನಂತೆ. ಆದರೆ ಈ ಗುಪ್ತವ್ಯವಸ್ಥೆಯನ್ನು ಮರೆತ ಸಂಪಾದಕನು ತಂತಿ ಬಂದೊಡನೆ "ನಿಮ್ಮ ಲೆಕ್ಕದಲ್ಲಿ ಏನೂ ಉಳಿದಿಲ್ಲ. ಹಣ ಕಳಿಸುವದಿಲ್ಲ"ವೆಂದು ಉತ್ತರವಿತ್ತು ಒಂದು ದೊಡ್ಡ ಸುದ್ದಿಯನ್ನು ಕಳೆದುಕೊಂಡನಂತೆ !

#### ಮುಖ್ಯ ಮಂತ್ರಿ ಸಿಗಲಿಲ್ಲ!

ಹೊಸತಾಗಿ ಆರಿಸಿ ಬಂದ ಫ್ರೆಂಚ ಶಾಸನ ಸಭೆಗೆ ದೇಶವನ್ನು ಆಳಲು ಮುಖ್ಯ ಮಂತ್ರಿಯೊಬ್ಬ ಬೇಕಾಗಿದ್ದಾನೆ, ಆದರೆ ಸಿಗಲೊಲ್ಲ! ಅತಿ ಪ್ರಬಲ ಪಕ್ಷವಾದ ಕಮ್ಯುನಿಸ್ಟ ಪಕ್ಷದ ಮುಂದಾಳು ಥಾರೇಜನು ಆ ಸ್ಥಾನಕ್ಕೆ ಹುರಿಯಾಳಾದ. ೩೧೦ ಮಿಕ್ಕ ಮತಬೀಳಬೇಕಾಗಿದ್ದರಿಂದ ೨೮೯ ಮತ ದೊರಕಿಸಿದ ಅವನು ಉತ್ತೀರ್ಣನಾಗಲಿಲ್ಲ. ಈಗಿನ ಮುಖ್ಯ ಮಂತ್ರಿ ಬಿಡಾಲ (ಎಂ ಆರ್ ಪಿ ಪಕ್ಷ) ನು ಆ ಮೇಲೆ ನಿಂತ. ಅವನಿಗೆ ಬರಿ ೨೪೦ ಮತ ಬಿದ್ದವು. ಇನ್ನೂ ಒಬ್ಬಿಬ್ಬರು ತಮ್ಮ ಅದೃಷ್ಟ ಪರೀಕ್ಷೆ ಮಾಡುವವರಿದ್ದಾರಂತೆ. ಆದರೆ ಕಮ್ಯುನಿಸ್ಟ ಮತ್ತು ಎಂ ಆರ್ ಪಿ ಈ ಎರಡು ಪ್ರಬಲ ಪಕ್ಷಗಳ ಬೆಂಬಲವಿಲ್ಲದ ಯಾವನೂ ಮುಖ್ಯಮಂತ್ರಿಯಾಗಲಾರ. ಸಾಮ್ಯವಾದಿಗಳೂ ಕಮ್ಯುನಿಸ್ಟರೂ ಸೇರಿದರೆ ಕೂಡ ಅವಶ್ಯಕ ಬಹುಮತ ಅವರಿಗೆ ದೊರೆಯದು.

#### ಸಿದ್ದಿಕಿ ಪಾಶಾರ ರಾಜೀನಾಮೆ

ಅಂಗ್ಲೊ-ಇಜಿಪ್ಶನ್ ಒಪ್ಪಂದ (೧೯೩೬)ವನ್ನು ಬದಲಾಯಿಸುವ ಬಗ್ಗೆ ಬ್ರಿಟಿಶ ವಿದೇಶ ಮಂತ್ರಿ ಬೆವಿನ್ನರೊಡನೆ ಕಚ್ಚಾ ಒಡಂಬಡಿಕೆ ಮಾಡಿಕೊಂಡ ಇಜಿಪ್ತದ ಮುಖ್ಯ ಮಂತ್ರಿ ಸಿದ್ದಿಕಿ ಪಾಶರು ತಮ್ಮ ಪಾರ್ಲಮೆಂಟಿನಿಂದ ವಿಶ್ವಾಸ ಪ್ರದರ್ಶಕ ಗೊತ್ತುವಳಿಯನ್ನು. ಪಡೆದರೂ ಕೊನೆಗೆ ವಿಶ್ವಾಮಿತ್ರನನ್ನು ನಂಬಿದ ತ್ರಿಶಂಕುವಿನಂತಾಗಿ ರಾಜೀನಾಮೆ ಕೊಡಬೇಕಾಯಿತು. ಸುಡಾನದ ಭವಿತವ್ಯ, ಬ್ರಿಟಿಶ ಪಡೆಗಳ ಹಿಂದೆಗೆತ ಮತ್ತು ಗಂಡಾಂತರ ಸಮಯದಲ್ಲಿ ಆಂಗ್ಲೋ-ಇಜಿಪ್ಶನ್ ಸಹಕಾರ ಈ ಎಲ್ಲ ವಿಷಯುಗಳಲ್ಲಿಯೂ ಒಳಗೆ ಸಾಮ್ಯವಾದಿ ಹೊರಗೆ ಸಾಮ್ರಾಜ್ಯವಾದಿ ಧೋರಣೆ ನಡೆಸಬೇಕೆಂಬ ವಿಚಿತ್ರ ಮಹತ್ವಾಕಾಂಕ್ಷೆಯ ಬ್ರಿಟಿಶ ವಿದೇಶ ಮಂತ್ರಿಗೆ ಕೈಸಡಿಲು ಬಿಟ್ಟು ಸಿದ್ದಿಕಿ ಪಾಶಾರು ದೇಶದ ವಿಶ್ವಾಸ ಕಳೆದುಕೊಂಡಿದ್ದರು. ಈ ವರೆಗೆ ವಿದ್ಯಾರ್ಥಿಗಳಿಗೆ ಮಾತ್ರ ಸೀಮಿತವಾಗಿದ್ದ ವಿರೋಧ ಪಕ್ಷ ಪಕ್ಷದ ತೀವ್ರ ನಿಷೇಧದ ಮೂಲಕ ವಕೀಲ ವರ್ಗಕ್ಕೂ ಹಬ್ಬಿ ಅವರು ದೇಶಾದ್ಯಂತ ಒಂದು ದಿನದ ಹರತಾಳ ಆಚರಿಸಿದರು. ಇದಕ್ಕೆ ಸರಿಯಾಗಿ ಬ್ರಿಟಿಶ ಸರಕಾರದ ಒಪ್ಪಿಗೆಯಿಂದ ಸುಡಾನದ ಗವರ್ನರ ಜನರಲ್ಲರು "ಸುಡಾನದ ಜನರನ್ನು ಸ್ವರಾಜ್ಯಕ್ಕೆ ಸಿದ್ಧಗೊಳಿಸಿ ತಮ್ಮ ಭವಿತವ್ಯವನ್ನು ನಿರ್ಣಯಿಸಿಕೊಳ್ಳುವ ಹಕ್ಕು ಅವರಿಗೆ ಕೊಡುವ ಬ್ರಿಟಿಶ ಧೋರಣ ಬದಲಾಗಿಲ್ಲ" ಎಂದು ಹೇಳಿಕೆ ಹೊರಡಿಸಿದರು. ಸುಡಾನದಲ್ಲಿ ಹಿಂದುಸ್ತಾನದಲ್ಲಿರುವಂತೆ ಇಜಿಪ್ತದಿಂದ ಬೇರಾಗಬೇಕೆಂಬ ಪಾಕಿಸ್ತಾನವಾದಿಗಳಿದ್ದೇ ಇರುವರು. ಗವರ್ನರ ಜನರಲ್ಲರ ಈ ಹೇಳಿಕೆಯಿಂದ ಸುಡಾನ ಇಜಿಪ್ತದ ಭಾಗವಾಗಿರಬೇಕೆಂಬ ಇಜಿಪ್ತದ ರಾಷ್ಟ್ರೀಯ ಆಕಾಂಕ್ಷೆಗೆ ನೀರು ಬಿದ್ದಂತಾಯಿತು. ಬೆವಿನ್-ಸಿದ್ದಿಕಿ ಕರಡು ಒಪ್ಪಂದಕ್ಕೆ ಇದು ವಿರುದ್ಧವಾಗಿದೆಯೆಂದು ಸಿದ್ದಿಕಿಯವರು ರಾಜೀನಾಮೆ ಕೊಟ್ಟರು. ಈಗ ಹಿಂದಿನ ಮುಖ್ಯ ಮಂತ್ರಿಗಳಲ್ಲೊಬ್ಬರಾದ ನೊಕ್ರಾಸಿ ಪಾಶಾರು (ಸಾದ ಪಕ್ಷ) ಮತ್ತೆ ಮುಖ್ಯ ಮಂತ್ರಿಗಳಾಗಿದ್ದಾರೆ. ಅವರು ಬೆವಿನ್ನರೊಡನೆ "ಅಥ" ಎಂದು ಮೊದಲಿಂದಲೇ ಪ್ರಾರಂಭಿಸಬೇಕಾದೀತು.

#### ಇರಾಣದಲ್ಲಿ ಅಂತರ್ಯುದ್ಧ

ಮೊದಲೇ ಎಚ್ಚರಿಕೆ ಕೊಟ್ಟಂತೆ ತೆಹರಾನದ ಕೇಂದ್ರ ಸರಕಾರದ ಪಡೆಗಳು ಅಝುರಬೈಜಾನದ "ಸ್ವಾಯತ್ತ" ಪ್ರಾಂತದಲ್ಲಿ ಕಳೆದವಾರ ಪ್ರವೇಶಿಸಿದ್ದರೊಡನೆ ಹಿಂದುಸ್ತಾನದ ನೆರೆನಾಡುಗಳಲ್ಲಿ ಎರಡನೆಯ ರಾಷ್ಟ್ರದಲ್ಲಿ ಯಾದವೀ ಕಲಹ ಪ್ರಾರಂಭವಾದಂತಾಗಿದೆ. ಕೇಂದ್ರ ಮಜಲೀಸಿಗೆ (ಶಾಸನ ಸಭೆ) ಚುನಾವಣೆ ಜರುಗುವದನ್ನು ಪರಿಶೀಲಿಸಲು ಕೇಂದ್ರಪಡೆಗಳಿಗೆ ಅಝುರಬೈಜಾನದಲ್ಲಿ ಪ್ರವೇಶ ಕೊಡಬೇಕೆಂದು ಮುಖ್ಯ ಮಂತ್ರಿ ಘುವಾಮ ಸುಲ್ತಾನೆಯವರು ನೆವ ತೆಗೆದಿದ್ದರು. ಅಝುರಬೈಜಾನದಲ್ಲಿ ರಶಿಯನ್ ಪಕ್ಷಪಾತಿ ಸರಕಾರ ಸ್ಥಾಪಿತವಾದುದು ಘುವಾಮರಿಗೆ ಎಳ್ಳಷ್ಟು ಸಹನೆಯಿದ್ದಿಲ್ಲವೆಂದೂ ರಶಿಯನ್ ಪಡೆಗಳು ಹೇಗಾದರೂ ಹೊರಬೀಳಲೆಂದಾಶಿಸಿ ಅವರು ಅಝುರಬೈಜಾನದೊಡನೆ ಒಪ್ಪಂದ ಮಾಡಿಕೊಂಡು ಹೊತ್ತು ಕಾಯುತಿದ್ದರೆಂದೂ ತೋರುತ್ತದೆ. ಏಕಂದರೆ "ನಿಮ್ಮ ನಾಡಿನಲ್ಲಿ ಅಧಿಕಾರ ಸ್ಥಾನವನ್ನು ಆಕ್ರಮಿಸಿರುವ ಪುಂಡರನ್ನು ಹಿಡಿದು ದಂಡಿಸಿರಿ!" ಎಂದು ಅವರು ಆಕಾಶವಾಣಿಯಲ್ಲಿ ಅಝುರಬೈಜಾನ ರೈತರಿಗೆ ಸಂದೇಶವಿತ್ತಿದ್ದಾರೆ. ಕೇಂದ್ರ ಸರಕಾರದ ಮೂರು ದಲಗಳು ಅಝುರಬೈಜಾನದಲ್ಲಿ ನುಗ್ಗಿವೆ. ಆದರೆ ಅಝುರಬೈಜಾನದ ನಾಯಕರೂ ಕೈಕಟ್ಟಿ ಕುಳಿತಿಲ್ಲ. ಅವರು ಪ್ರಾಂತದ ಸಮಸ್ತ ಬಲವನ್ನು ಅಣಿಗೊಳಿಸಿ ಕೇಂದ್ರ ಸರಕಾರದ "ಅತಿಕ್ರಮಣ"ವನ್ನು ಎದುರಿಸಲು ನಿರ್ಧರಿಸಿದ್ದಾರೆ.

#### ಇಂಡೋನೇಶಿಯನ್ ಒಪ್ಪಂದ

ಡಚ್ ಪ್ರತಿನಿಧಿ ಮಂಡಲದವರು ಇಂಡೊನೇಶಿಯನ್ ಪ್ರಜಾರಾಜ್ಯದ ಪ್ರತಿನಿಧಿಗಳೊಡನೆ "ಇಂಡೊನೇಶಿಯನ್-ಹಾಲಂಡ್ ಸಮಪಾಲುಗಾರಿಕೆ" ರಾಜ್ಯ ಸ್ಥಾಪಿಸಲು ಮಾಡಿಕೊಂಡ ಒಡಂಬಡಿಕೆಗೆ ಹಾಲಂಡಿನ ಮಂತ್ರಿಮಂಡಲ ಒಪ್ಪುವದಿಲ್ಲವೆಂದು ಮೊದಲು ಭಾವಿಸಲಾಗಿದ್ದರೂ ಆದಕ್ಕೆ ಒಪ್ಪಿಗೆ ಕೊಟ್ಟಿದೆಯೆಂದು ಈಗ ಸುದ್ದಿ ಬಂದಿದೆ. ಆದರೆ ಇಂಡೊನೇಶಿಯಾದ ಪ್ರಬಲ ರಾಜಕೀಯ ಪಕ್ಷವೊಂದು ಈ ಯೋಜನೆಯನ್ನು ತಿರಸ್ಕರಿಸಬೇಕೆಂದು ನಿರ್ಣಯಿಸಿದೆಯೆಂದು ಹೇಳಲಾಗಿದೆ. ಹಾಗಿದ್ದರೆ ಮತ್ತೆ ರಕ್ತಪಾತ ಪರಿಣಮಿಸಬಹುದು.

* * *

ಚೀನದಲ್ಲಿ ಯಾದವೀ ಯುದ್ಧ ತೀಕ್ಷ್ಣವಾಗಿದು ಕಮ್ಯುನಿಸ್ಟರ ರಾಜಧಾನಿಯಾದ ಯೆನಾನದ ಮೇಲೇರಿ ಹೋಗಿ ಕೊನೆಗೊಮ್ಮೆ ಅವರನ್ನು ಧ್ವಂಸ ಮಾಡುವ ಉದ್ದೇಶದಿಂದ ಚಿಯಾಂಗ ಕೈಶೇಕರ ಪಡೆಗಳು ಯೆನಾನ ಗಡಿಯುದ್ದಕ್ಕಿರುವ ಮಲಂಚೆನ್ ಭಾಗವನ್ನು ಆಕ್ರಮಿಸಿವೆ. ಕಮ್ಯುನಿಸ್ಟರು, ಕೇಂದ್ರ ಸರಕಾರಕ್ಕೂ ಕಮ್ಯುನಿಸ್ಟರಿಗೂ ಒಪ್ಪಂದ ಸಾಧ್ಯವಿಲ್ಲೆಂದೂ ಈಗ ಪ್ರಾರಂಭವಾಗಿರುವ ಏಕಪಕ್ಷೀಯ ರಾಷ್ಟ್ರೀಯ ಶಾಸನ ಸಭೆಯನ್ನು ನಿಲ್ಲಿಸಿ ಜನವರಿ ೧೩ ಕ್ಕೆ ಇದ್ದ ಸ್ಥಳಗಳಿಗೆ ಕೇಂದ್ರ ಸರಕಾರದವರು ತಮ್ಮ ಪಡೆಗಳನ್ನು ಹಿಂತೆಗೆದುಕೊಂಡರೆ ಮಾತ್ರ ಮಾತುಕತೆ ಸಾಧ್ಯವೆಂದೂ ಹೇಳುತ್ತಾರೆ.

# ದಕ್ಷಿಣ ಆಫ್ರಿಕೆಯ ಕಲಂಕಿತ ಪ್ರಜಾಸತ್ತೆ

(ಬ್ರಿಟಿಶ ಪಾರ್ಲಮೆಂಟ ಸದಸ್ಯರಾದ ರೆಜಿನಾಲ್ಡ ಸೊರೆನ್ಸೆನ್ನರಿಂದ)

"ಪ್ರಜಾಸತ್ತೆ" ಯೆಂಬ ಶಬ್ದ ಬಹಳ ಸಂದಿಗ್ಧಾರ್ಥವನ್ನು ಪಡೆದಿದೆ. "ತ್ರಿಮೂರ್ತಿಗಳು" ಕೂಡ ಅದರ ವ್ಯಾಖ್ಯಾನ ಮಾಡುವಲ್ಲಿ ಏಕಾಭಿಪ್ರಾಯವುಳ್ಳವರಾಗಿಲ್ಲ.

"ಪ್ರಜಾಸತ್ತೆ" ಯಲ್ಲಿ ರಾಜಕೀಯ ಸ್ವಾತಂತ್ರ್ಯವೂ ಸ್ಥಾನ ಮಾನಗಳಲ್ಲಿ ಸಾಮ್ಯವೂ ಇರಬೇಕೆಂದು ವಾದಿಸುವವರು ಕೂಡ ಅದನ್ನು ತಮ್ಮ ಕೃತಿಗಳಿಂದ ಪ್ರದರ್ಶಿಸಬೇಕು. ಇಲ್ಲದಿದ್ದರೆ ಆ ಶಬ್ದದಲ್ಲಿ ಏನೂ ಅರ್ಥವಿಲ್ಲವೆಂದು ಅದನ್ನು ತ್ಯಜಿಸಿಬಿಡುವದೊಳಿತು. ಸಾಮಾಜಿಕ ಇತಿಮಿತಿಗಳನ್ನು ಹಾಕಿದರೆ ಸಾಮ್ಯ ಸ್ವಾತಂತ್ರ್ಯಗಳ ಕಲ್ಪನೆಗೆ ಭಂಗ ಬರುತ್ತದೆ.

ಈ ಗಂಡಾಂತರವನ್ನು ಬೆಳಕಿಗೆ ತರಲು ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ಮಾಡಿದ ಪ್ರಯತ್ನದಿಂದ ದಕ್ಷಿಣ ಆಫ್ರಿಕೆಯ ಆತ್ಮಸಾಕ್ಷಿಗೆ ಹುಳುಹುಳು ಎನಿಸದಿರದು. ಆದರೆ ಅದು ದಕ್ಷಿಣ ಆಫ್ರಿಕೆಗೆ ಆರೋಗ್ಯದಾಯಕವಾಗಿ ಪರಿಣಮಿಸುವದು ಖಂಡಿತ. ಏಕೆಂದರೆ ದಕ್ಷಿಣ ಆಫ್ರಿಕೆಯ ಪ್ರಜಾಸತ್ತೆ ಅತ್ಯಂತ ಕಲುಷಿತವೂ ವಿಷಪೂರಿತವೂ ಆಗಿದೆ.

ನಿಜ: ಅಮೇರಿಕೆಗೂ ಅಂಥ ಕೆಲ ಯುಕ್ತರಾಷ್ಟ್ರ ಸದಸ್ಯರಿಗೂ ಈ ಪ್ರಶ್ನೆಯ ತರ್ಕಬದ್ಧ ಪರಿಣಾಮ ಅಷ್ಟೊಂದು ರುಚಿಸಲಿಕ್ಕಿಲ್ಲ. ಇದು ಶುದ್ಧ ಅಂತರಿಕ ಪ್ರಶ್ನೆಯೆಂಬ ವಾದಕ್ಕೆ ಅಂಗೀಕಾರ ದೊರೆತರೆ ಅವರು ಒಳಗೊಳಗೆ ಸಂತೋಷಪಡಲೂಬಹುದು.

ಅದರೂ ಈ ವಿಷಯವನ್ನು ನಿರವಧಿ ಮುಂದೆ ತಳ್ಳಿದ್ದಾದರೆ ಅದರಿಂದ ಅಂತರ್ ರಾಷ್ಟ್ರೀಯ ಪ್ರತಿಕ್ರಿಯೆಗಳಾಗದಿರವು. ಅದರಲ್ಲಿಯೂ ಈಗ ಸ್ವಾತಂತ್ರ್ಯದ ಹೊಸಲಿಗೆ ಬಂದಿರುವ ಹಿಂದುಸ್ತಾನದ ಸ್ಥಾನಮಾನ ಜಗತ್ತಿನಲ್ಲಿ ಹೆಚ್ಚಿದೆ. ಈ ಸಂಗತಿ ದಕ್ಷಿಣ ಆಫ್ರಿಕೆಗೆ ಗೊತ್ತಿಲ್ಲದಿಲ್ಲ. ಆದುದರಿಂದ ಅದು, ಮುಖ್ಯವಾಗಿ ನಾತಾಳಪ್ರಾಂತ, ತನ್ನ ವರ್ಣ ಪಕ್ಷಪಾತ ನೀತಿಗೆ ಸುಳ್ಳು ಹೊದಿಕೆ ಹೊದಿಸಲು ಪ್ರಯತ್ನಿಸುತಿದೆ.

## ಪ್ರತಿನಿಧಿಯಿಲ್ಲದ ಪ್ರಾತಿನಿಧ್ಯ

"ದರ್ಬಾನ್ ನಗರಸಭೆ ಹಾಗು ದರ್ಬಾನ ಸಂಯುಕ್ತ ವಾರ್ಡ ಸಮಿತಿ" ಗಳು ಜತೆಯಾಗಿ ಹೊರಡಿಸಿದ ಸಾಹಿತ್ಯದಲ್ಲಿ ಯುರೋಪಿಯನ್ನರು ಹಿಂದೀಯರನ್ನು ನಡೆಸಿಕೊಳ್ಳುವ ರೀತಿಯನ್ನೂ "ಏಶಿಯಾಟಿಕ ಭೂಧಾರಣ ಮತ್ತು ಹಿಂದೀ ಪ್ರಾತಿನಿಧ್ಯ ಕಾಯಿದೆ"ಯನ್ನೂ ಸಮರ್ಥಿಸಲಾಗಿದೆ.

ಅದು ಹೇಳುತ್ತದೆ: "ಮೊದಲನೆಯದಾಗಿ, ಹಿಂದೀ ಸಮಾಜ ಇಲ್ಲಿಯ ಶಾಶ್ವತ ಜನತೆಯೆಂದು ತಿಳಿಯಲ್ಪಟ್ಟದ್ದು ಮೊನ್ನೆಮೊನ್ನೆಯೆಂಬ ಮಾತು ಬಹಳ ಮಹತ್ವದ್ದು." ಮುಂದೆ ಅದು ಹಿಂದೀಯರಿಗೆ "ಪಾರ್ಲಿಮೆಂಟಿನ ಎರಡೂ ಭವನಗಳಲ್ಲಿಯೂ ಪ್ರಾಂತಿಕ ಶಾಸನ ಸಭೆಯಲ್ಲಿಯೂ ಪ್ರಾತಿನಿಧ್ಯ ಕೊಡಲಾಗಿದೆ" ಎನ್ನುತ್ತದೆ. ಆದರೆ ಹಿಂದೀಯರಿಗೆ ಅಂಥ ಪ್ರತಿನಿಧಿಗಳಾಗಲೆಡೆಯಿಲ್ಲವೆಂದು ಮಾತ್ರ ಅದು ಹೇಳುವದೇ ಇಲ್ಲ!

ಇಂಥ ಪ್ರಚಾರ ತೀರ ಸರಳವಾಗಿದೆ. ೧೮೬೦ ರಲ್ಲಿಯೂ ಅನಂತರವೂ ಹಿಂದೀಯರನ್ನು ಕರಾರುಬದ್ಧ ಕೂಲಿಕಾರರಾಗಿ ಬರುವಂತೆ ಮನವೊಲಿಸಲು ತೋರಿಸಲ್ಪಟ್ಟ ಆಮಿಷಗಳು; ತಮ್ಮ ಕರಾರುಗಳ ಅವಧಿ ಮುಗಿದನಂತರ ಅವರು ಅಲ್ಲೇ ತಳವೂರಿ ಕೆಲಸ ಮಾಡಬಹುದೆಂಬ ಆಶ್ವಾಸನೆಗಳು; ಸಕ್ಕರೆಯನ್ನು ಉತ್ಪಾದಿಸುವ ಕೆಲಸ ಸುಸೂತ್ರವಾಗಿ ಸಾಗಬೇಕೆಂದು ನಾತಾಳ ಸರಕಾರ ಹಿಂದೀಯರು ವಲಸೆ ಬರುವದಕ್ಕಾಗಿ ಕೊಟ್ಟ ಸಹಾಯಧನ; ಗಾಂಧೀಜಿ ಮೊದಲಾದವರು ಹಿಂದಿನ ದಬ್ಬಾಳಿಕೆಯ ವಿರುದ್ಧ ಕೈಕೊಂಡ ಹೋರಾಟ, ಮತ್ತು ೧೯೩೨ ರಲ್ಲಿ ದಕ್ಷಿಣ ಆಫ್ರಿಕಾ ದುಂಡುಮೇಜಿನ ಪರಿಷತ್ತಿನ ಕಾಲಕ್ಕೆ ಯೂನಿಯನ್ ಸರಕಾರ, "ತನ್ನ ಅಧೀನದಲ್ಲಿರುವ ಜನತೆಯ ಪ್ರತಿಯೊಂದು ಭಾಗದ ಉದ್ಧಾರ ಮಾರ್ಗವನ್ನು ಕಂಡು ಹಿಡಿಯುವದು ಪ್ರತಿಯೊಂದು ನಾಗರಿಕ ಸರಕಾರದ ಕರ್ತವ್ಯ... ಇಲ್ಲಿ ಶಾಶ್ವತವಾಗಿ ಉಳಿಯುವ ಹಿಂದೀ ಸಮಾಜವು ಇತರ ಸಮಾಜಗಳಿಗಿಂತ ಹಿಂದುಳಿಯಬಾರದೆಂಬ ವಿಚಾರವನ್ನು ಈ ಸರಕಾರ ಒಪ್ಪುತ್ತದೆ" ಎಂದು ಹೇಳಿದುದು; ಇದನ್ನೆಲ್ಲ ನೆನೆದುಕೊಂಡರೆ ಹಿಂದೀಯರು ಇಲ್ಲಿಯ ಶಾಶ್ವತ ಜನತೆಯೆಂದು ತಿಳಿಯಲ್ಪಟ್ಟದ್ದು ಇತ್ತೀಚೆಗೆ ಎಂಬ ವಾದ ವಿಚಿತ್ರವೇ ಎನಿಸುತ್ತದೆ.

ಟ್ರಾನ್ಸವಾಲದಲ್ಲಿ ಬ್ರಿಟಿಶ ಯೂಟಲ್ಯಾಂಡರರಿಗೆ (Uitlanders) ಮತಾಧಿಕಾರವಿಲ್ಲದ್ದರ ವಿರುದ್ಧ ಅವರು ೧೮೯೯ ರಲ್ಲಿ ಪ್ರತಿಭಟಿಸಿದ್ದು ಅನಂತರ ಬ್ರಿಟಿಶರು ಇತರ ಕಾರಣಗಳೊಡನೆ ಅದೂ ಒಂದು ಕಾರಣದಿಂದ ಬೋಅರರ ವಿರುದ್ಧ ಯುದ್ಧ ಹೂಡಿದ್ದು ಇಂಗ್ಲೀಷ ಜನತೆಗೆ ಮರೆತು ಹೋಗಿರಬಹುದು. ದಕ್ಷಿಣ ಆಫ್ರಿಕಾ ಯುರೋಪಿಯನ್ನರು ಅದನ್ನು ಬೇಕೆಂದೇ ಮರೆತಿರಬಹುದು. ನಾಜಿಗಳು ಯಹೂದ್ಯರನ್ನೂ ಅವರ ಮಾನವೀ ಹಕ್ಕುಗಳನ್ನೂ ಪಾಶವೀ ರೀತಿಯಿಂದ ಹತ್ತಿಕ್ಕಿದ್ದರ ವಿರುದ್ಧ ದಕ್ಷಿಣ ಆಫ್ರಿಕೆಯ ಯಹೂದ್ಯರು ಪ್ರದರ್ಶಿಸಿದ ನ್ಯಾಯ್ಯವಾದ ಪ್ರತಿಭಟನೆಗುನ್ನು ಯಹೂದ್ಯರಿಗೆ ನಾವು ನೆನಪು ಮಾಡಿ ಕೊಡಬೇಕಾಗಿದೆ. ನ್ಯಾಯವೆಂಬುದು ಹಿಂದೀಯರಿಗೂ ಯುರೋಪಿಯನ್ನರಿಗೂ ಸಮಾನವಾಗಿಯೇ ಅನ್ವಯಿಸಬೇಕು. ಇಲ್ಲದಿದ್ದರೆ ನ್ಯಾಯವನ್ನು ವಿಕೃತಗೊಳಿಸಲು ವರ್ಣ ಪಕ್ಷಪಾತದ ತತ್ವವನ್ನು ಉಪಯೋಗಿಸಿದಂತಾಗುತ್ತದೆ.

ಅಟ್ಲಾಂಟಿಕ ತಾಮ್ರಪಟ ಮತ್ತು ಇತರ ಘೋಷಣೆಗಳು ಸಮುದ್ರ ಪಾಲಾಗಿರುವಾಗ ಅವುಗಳ ಅವಶೇಷಗಳಿಂದ ನೈತಿಕ ನಿಯಮಗಳನ್ನು ಉಳಿಸಿಕೊಳ್ಳಲು ಎಲ್ಲ ನ್ಯಾಯವಾದಿಗಳೂ ಪ್ರಯತ್ನಿಸುತಿದ್ದಾರೆ. ದಕ್ಷಿಣ ಆಫ್ರಿಕೆಯ ಬಿಳಿ "ಕುಲೀನ"ರು ಈ ಪ್ರಯತ್ನಗಳಿಗೆ ಅಡ್ಡಗಾಲು ಹಾಕತಕ್ಕದ್ದಲ್ಲ. ಈ ವಿಷಯದಲ್ಲಿ ದಕ್ಷಿಣಾಫ್ರಿಕೆಯ ಚರ್ಯೆಯಿಂದ ಬ್ರಿಟಿಶ ಪ್ರಗತಿಗಾಮಿ ಜನರಿಗೆ ಅಸಂತೋಷವಾಗಿದೆ. ಆದರೆ ಬಹಿರಂಗ ಅಭಿಪ್ರಾಯ ಪ್ರದರ್ಶನ ಮತ್ತು ವೈಯಕ್ತಿಕ ಒತ್ತಾಯಕ್ಕಿಂತ ಹೆಚ್ಚು ಬ್ರಿಟಿಶರು ಈ ವಿಷಯದಲ್ಲಿ ಮಾಡಲು ಅವಕಾಶವಿಲ್ಲ. ದಕ್ಷಿಣಾಫ್ರಿಕೆ ಸ್ವತಂತ್ರ ಡೋಮಿನಿಯಿನ್ ರಾಜ್ಯವಾಗಿದ್ದು ಬ್ರಿಟಿಶ ಸರಕಾರದ ಅಧೀನದಲ್ಲಿರುವದಿಲ್ಲ.

ಆದರೆ ಡೊಮಿನಿಯನ್ ಕಾರ್ಯದರ್ಶಿಗಳು ತನ್ನ ಸರ್ವ ಪ್ರಭಾವವನ್ನು ಪಯೋಗಿಸಿ ವರ್ಣಗಳಲ್ಲಿ ಭೇದವಿಲ್ಲದ ಪ್ರಜಾಸತ್ತೆಯ ತತ್ವವನ್ನು ದಕ್ಷಿಣ ಆಫ್ರಿಕೆ ಒಪ್ಪುವಂತೆ ಮಾಡಲು ಪ್ರಯತ್ನಿಸಬೇಕೆಂದು ಆಶಿಸಲಾಗಿದೆ.

ಜನರಲ್ ಸ್ಮಟ್ಸರು ಸ್ವಾತಂತ್ರ್ಯ ನ್ಯಾಯಗಳ ಹಾದಿ ಹಿಡಿಯಿರೆಂದು ರಾಷ್ಟ್ರಗಳಿಗೆ ಉಪದೇಶವಿತ್ತ ಮಹನೀಯರು. ಆದರೆ ನಾತಾಳ ಹಿಂದೀ ಕಾಂಗ್ರೆಸ್ ಅಧ್ಯಕ್ಷರಾದ ಡಾ. ನಾಯಕರೇ ಮೊದಲಾದವರನ್ನು ಸೆರೆಮನೆಗಟ್ಟಿದ್ದು ಅವರ ಉಪದೇಶ ಓದುವದು ಶಾಸ್ತ್ರ ಇಕ್ಕುವದು ಗಾಳ ಎಂಬಂತಿದೆಯೆಂದು ತೋರಿಸುತ್ತದೆ. ಅವರ "ಪೆಗಿಂಗ್ ಕಾಯದೆ" ಯಾದರೂ "ಪ್ರಜಾತಂತ್ರ"ದ ಉತ್ತೇಜಕ ಉದಾಹರಣೆಯಿಲ್ಲ.

ದಕ್ಷಿಣ ಆಫ್ರಿಕೆಯಲ್ಲಿ ಬ್ರಿಟಿಶ, ಯಹೂದ್ಯ, ಆಫ್ರಿಕಾನರ, ಹಿಂದೀ, ಮೂಲನಿವಾಸಿ ಆಫ್ರಿಕನ್, ಕಂದು ಮತ್ತು ಬಡ ಬಿಳಿ ಜನಾಂಗಗಳ ಕಲಸು ಮೇಲೋಗರವಿದ್ದರೂ ೨,೫೦೦,೦೦೦ ಯುರೋಪಿಯನ್ನರು ೨೫೦,೦೦೦ ಹಿಂದೀಯರನ್ನು ಹೊರಗಿಡಲು ಮತ್ತು ಅಡಿಯಾಳಾಗಿ ಮಾಡಿಕೊಳ್ಳಲು ಪ್ರಯತ್ನಿಸಿದರೆ ಆ ದೇಶದ ಸಮಸ್ಯೆ ಸರಳವಾಗುವಂತಿಲ್ಲ. ಇಂಥ ದುರ್ಬಲ ನೆಲೆಕಟ್ಟಿನ ಮೇಲೆ, ಅದೂ ಯಾವ ನೈತಿಕ ಬಲವೂ ಇಲ್ಲದ ಆಧಾರದ ಮೇಲೆ ಈ ಗಂಡಾಂತರಮಯ ಕಾಲದಲ್ಲಿ ಯಾವ ಸಾಮಾಜಿಕ ವ್ಯವಸ್ಥೆಯೂ ತಾಳಲಾರದು.






ಕರ್ಮವೀರ ಹರಿಜನ ಪುರವಣಿ


# ಧರ್ಮದಲ್ಲಿ ಚಾಣಕ್ಯ ನೀತಿ

ಯಾವುದೊಂದು ಧರ್ಮದ ಉತ್ಸಾಹೀ ಪುರಸ್ಕರ್ತರು ಸರಕಾರವನ್ನು ತಮ್ಮ ನಿಯಂತ್ರಣದಲ್ಲಿ ತೆಗೆದುಕೊಂಡು ಆ ಧರ್ಮದ ಪ್ರಚಾರ ಮಾಡುವ ಮಹತ್ವಾಕಾಂಕ್ಷೆಯನ್ನು ತಾಳಿದಾಗೆಲ್ಲ, ರಕ್ತಪಾತ ಮತ್ತು ಅಮಾನುಷ ಅತ್ಯಾಚಾರ ನಡೆದದುಂಟು. ಪ್ರಾಚೀನಕಾಲದಲ್ಲಿ ಅರಸನೆ ರಾಜ್ಯದ ಸರ್ವಾಧಿಕಾರಿಯಾಗಿರುವಾಗ ತಮ್ಮ ಧರ್ಮವನ್ನು ಸ್ವೀಕರಿಸಲು ಅವನ ಮನವಲಿಸುವದು ಸುಲಭವಾದ ಮಾರ್ಗವಾಗಿದ್ದಿತು. ಅನಂತರ ಆ ಅರಸನ ಮುಖಾಂತರವಾಗಿಯೆ ದೇಶದಲ್ಲೆಲ್ಲ ಆ ಧರ್ಮದ ಪ್ರಚಾರ ಮಾಡಲಾಗುತಿದ್ದಿತು. ಆ ಧರ್ಮವನ್ನು ಸ್ವೀಕರಿಸುವವರಿಗೆ ಆಗ ವಿಶೇಷ ಲಾಭ ಮತ್ತು ನಿರಾಕರಿಸುವವರಿಗೆ ಶಿಕ್ಷೆ ಕಾಯ್ದಿಟ್ಟದ್ದವು. ತಪ್ಪಿತಸ್ಥನ ಮೇಲೆ ಕರ ಹೇರುವದು, ಬಹಿಷ್ಕರಿಸುವದು, ಸೆರೆಮನೆಗಟ್ಟುವದು, ಅವನ ಅವಯವಗಳನ್ನು ಕಡೆದು ಹಾಕುವದು, ಅನನ್ವಿತ ರೀತಿಯಿಂದ ಅವನ ಕೊಲೆ ಮಾಡುವದು, ಅವನ ಆಸ್ತಿಯನ್ನು ಜಪ್ತ ಮಾಡುವದು, ದೇಶಭ್ರಷ್ಟಮಾಡುವದು, ಸ್ತ್ರೀಯರನ್ನು ಮತ್ತು ಅಶಕ್ತರನ್ನು ಒತ್ತಾಯದಿಂದ ಧರ್ಮಾಂತರಿಸುವದು, ಅಲ್ಲದೆ ತಮ್ಮ ಬುದ್ಧಿಶಕ್ತಿಗೆ ಹೊಳೆದ ವಿವಿಧ ರೂಪದಿಂದ ಛಲಿಸುವದು ಇವೇ ಮೊದಲಾದ ಶಿಕ್ಷೆಗಳು ಆಗ ವಿಧಿಸಲಾಗುತಿದ್ದವು. ಕತ್ತಿ ಗುಂಡುಗಳ ಸಹಾಯದಿಂದಲೂ ಊರ ಹಲವು ದೇಶಗಳಲ್ಲಿ ಧರ್ಮಪ್ರಚಾರ ಸಾಗುತಿದ್ದಿತು.

ಬುದ್ಧನ ಅನುಯಾಯಿಗಳಲ್ಲೊಬ್ಬನಾದ ದೇವದತ್ತನು ಬುದ್ಧನನ್ನು ಬಿಟ್ಟುಹೋಗಿ ಬೇರೆ ಪಂಥವನ್ನು ಕಟ್ಟಲು ನಿರ್ಧರಿಸಿದಾಗ ಮಗಧ ದೇಶದ ರಾಜಪುತ್ರನಾದ ಅಜಾತಶತ್ರುವನ್ನು ತನ್ನ ಬಲೆಯಲ್ಲಿ ಕೆಡಹಿಕೊಳ್ಳಬೇಕೆಂದು ಬಗೆದನು. ಹಾಗೆ ಅವನನ್ನು ಬಲೆಯಲ್ಲಿ ಕೆಡಹಿಕೊಂಡ ನಂತರ ವೃದ್ಧರಾಜನನ್ನು ತುರುಂಗದಲ್ಲಿಡಲು ಅವನನ್ನು ಪ್ರೇರೇಪಿಸಿದನಲ್ಲದೆ ರಾಜ್ಯಪೀಠವನ್ನಲಂಕರಿಸಲೂ ಅವನನ್ನು ಪ್ರೋತ್ಸಾಹಿಸಿದನು. ಅನಂತರ ಅವನ ಸಹಾಯದಿಂದ ಬುದ್ಧನ ಕೊಲೆ ಮಾಡಲು ಕೂಡ ಅವನು ಹಲವಾರು ಸಲ ಪ್ರಯತ್ನಿಸಿದನು. ಅವನ ಅನುಯಾಯಿಗಳನ್ನು ಛಲಿಸಲು ಹವಣಿಸಿದನು.

ಪ್ರಲ್ಹಾದನಾಜನ ಕತೆ—ಒಬ್ಬ ವ್ಯಕ್ತಿಯ ಜೀವನವೆಂದು ತೋರುವಂತೆ ಕಾವ್ಯಮಯವಾಗಿ ವರ್ಣಿಸಲ್ಪಟ್ಟದೆ—ಪರಧರ್ಮೀಯ ಅರಸರು ಬೇರೆ ಧರ್ಮಸಂಥಪನವನ್ನು ಅಮಾನುಷ ರೀತಿಯಿಂದ ಛಲಿಸುತಿರುವುದನ್ನು ವಿವರವಾಗಿ ಚಿತ್ರಿಸುತ್ತದೆ.

ಜಗತ್ತಿನ ಇತಿಹಾಸವೆಲ್ಲ ಇಂಥ ಛಲನೆಯವೃತ್ತಗಳಿಂದ ತುಂಬಿದೆ. ಅಧಿಕಾರ ಕೈಯಲ್ಲಿದ್ದ ಒಂದು ಧರ್ಮದವರು ಪರಧರ್ಮೀಯರನ್ನು ಬಗೆಬಗೆಯಿಂದ ಛಲಿಸಿದ, ಕಾಲಾಂತರ ಆಧರ್ಮದವರ ಕೈಯಲ್ಲಿ ಅಧಿಕಾರ ಬಂದಾಗ ಮೊದಲಿನವರನ್ನು ಛಲಿಸಿದವರನ್ನು ತಿರುಗಿ ಛಲಿಸಿದ್ದ ಉದಾಹರಣೆಗಳುಂಟು. ಈ ರೀತಿಯಾಗಿ ಹಿಂದುಸ್ತಾನದಲ್ಲಿ ವೈದಿಕರು, ಬುದ್ಧರು, ಜೈನರು, ಲಿಂಗಾಯತರು, ಶೈವರು, ವೈಷ್ಣವರು, ಶೀಖರು ಮತ್ತು ಅವರ ಬೇರೆ ಬೇರೆ ಒಳಪಂಗಡದವರು ಅಧಿಕಾರದಲ್ಲಿದ್ದ ಧರ್ಮಾನುಯಾಯಿಗಳಿಂದ ಛಲಿಸಲ್ಪಟ್ಟದುಂಟು. ತಮ್ಮ ಕೈಯಲ್ಲಿ ಅಧಿಕಾರ ಬಂದ ಕೂಡಲೆ ಸರತಿಯಂತೆ ವಿರುದ್ಧ ಧರ್ಮವನ್ನು ಅವರು ಛಲಿಸಿದ್ದೂ ಉಂಟು. ಅದೇ ರೀತಿಯಾಗಿ ಯುರೋಪಿನಲ್ಲಿ, ಪಶ್ಚಿಮ ಏಶಿಯಾದಲ್ಲಿ 'ಕ್ರೂಸೇಡ'ಗಳು ಮತ್ತು 'ಜಹಾದು'ಗಳು ನಡೆದವು. ಯಹೂದ್ಯರು ಮತ್ತು ರೋಮನ್‌ರು ಕ್ರಿಶ್ಚನರನ್ನು ಛಲಿಸುವದು ಒಂದು ಕಾಲಕ್ಕೆ ನಡೆದರೆ, ಮತ್ತೊಂದು ಕಾಲಕ್ಕೆ ಕ್ರಿಶ್ಚನ್‌ರು ಯಹೂದ್ಯರನ್ನು ಛಲಿಸಿದ್ದುಂಟು. ಕ್ರಿಸ್ತಶಕದ ಪ್ರಾರಂಭದಿಂದ ಅರ್ವಾಚೀನ ಕಾಲದವರೆಗೆ ತಮ್ಮ ಧರ್ಮಪಂಥಕ್ಕೆ ವಿರೋಧಿಯಾಗಿದ್ದವರನ್ನೆಲ್ಲ ಅನನ್ವಿತ ರೀತಿಯಿಂದ ಛಲಿಸಿದ ಹೃದಯದ್ರಾವಕ ವರ್ಣನೆಗಳು ಮತ್ತು ಬೋಲ್ಶೆವಿಕ್‌ರಶಿಯದಲ್ಲಿ ಕ್ರಿಶ್ಚನ್ ಧರ್ಮವನ್ನೆ ಹತ್ತಿಕ್ಕಿಬಿಡಲು ಮಾಡಿದ ಪ್ರಯತ್ನಗಳು ಯುರೋಪ ಇತಿಹಾಸದಲ್ಲಿ ಸುಪ್ರಖ್ಯಾತವಿದ್ದುದರಿಂದ ಇಲ್ಲಿ ವಿವರವಾಗಿ ವರ್ಣಿಸುವ ಅವಶ್ಯಕತೆಯಿಲ್ಲ.

ಚೀನ ಮತ್ತು ಜಪಾನದಲ್ಲಿಯೂ ಇಂಥ ಕತೆಗಳಿಲ್ಲದಿಲ್ಲ. ಸರಕಾರಗಳು ಸರ್ವ ಧರ್ಮ ಪಂಥಾತೀತವಾಗಿ ಸಾರ್ವಜನಿಕಜೀವನಗಳಲ್ಲಿ ಪ್ರಜೆಗಳ ವಿಶಿಷ್ಟ ಧರ್ಮಕ್ಕೆ ಮಹತ್ವಕೊಡದೆ ನಿಷ್ಪಕ್ಷಪಾತರೀತಿಯಿಂದ ಎಲ್ಲ ಧರ್ಮದವರನ್ನು ನೋಡಹತ್ತಿದಂದಿನಿಂದಲೆ ಜನತೆಗೆ ಧರ್ಮಸ್ವಾತಂತ್ರ್ಯ ಸಿಕ್ಕಹತ್ತಿತು. ಮತ್ತು ಶಾಂತರೀತಿಯಿಂದ ತಮ್ಮ ಧರ್ಮವನ್ನನುಸರಿಸುವ ಅವಕಾಶ ದೊರೆಯಹತ್ತಿತು.

ಹಿಂದುಸ್ತಾನದಲ್ಲಿ ಬಹಳ ಸಂಘರ್ಷಗಳನ್ನನುಭವಿಸಿದ ನಂತರ ಧರ್ಮಗಳ ಅಭಿವೃದ್ಧಿಯಾಗಿ ಧಾರ್ಮಿಕ ಸಹಿಷ್ಣುತೆಯ ಸದ್ಗುಣ ಆಯಾ ಧರ್ಮಾನುಯಾಯಿಗಳಲ್ಲಿ ಬರಹತ್ತಿತು ಮತ್ತು ಶೈವ, ವೈಷ್ಣವ; ಜೈನ, ಬುದ್ಧ; ಏಕದೇವತಾವಾದಿ, ಅನೇಕ ದೇವತಾವಾದಿ; ಭೌತಿಕವಾದಿ ಮತ್ತು ನಿರೀಶ್ವರವಾದಿ ಮೊದಲಾದ ಪರಸ್ಪರ ವಿರುದ್ಧ ಮತ್ತು ತೀರ ಭಿನ್ನ ಭಿನ್ನವಾದ ಧರ್ಮಪಂಥಗಳು ಹಿಂದೂ ಧರ್ಮವೆಂದು ಹೇಳುವದಾದರೆ ಪರಸ್ಪರ ಧರ್ಮಸಹಿಷ್ಣುತಾಭಾವವೊಂದೆ ಇವೆಲ್ಲವುಗಳಿಗೆ ಸಾಮಾನ್ಯ ಮುದ್ರೆಯಾಗಿದ್ದಿತೆಂದು ಹೇಳಬಹುದು.

ಕ್ರಿಸ್ತ ಶಕದ ಪೂರ್ವದಲ್ಲಿಯೇ ಹಿಂದುಸ್ತಾನ ಈ ಸತ್ಯವನ್ನು ಕಂಡುಕೊಂಡಿತು. ಅದು ಜೀವನದಲ್ಲಿ ಚೆನ್ನಾಗಿ ಸಮರಸವಾಗಬೇಕಾದರೆ ಮುಂದೆ ಹಲವಾರು ಶತಮಾನಗಳು ಹತ್ತಿದವೆಂಬ ಮಾತು ಬೇರೆ. ಬಹುಶಃ ಇಸ್ಲಾಮ ಮೊದಲು ಹಿಂದುಸ್ತಾನದಲ್ಲಿ ಕಾಲಿಟ್ಟಾಗ ಧರ್ಮಸಹಿಷ್ಣುತಾಭಾವನೆ ಹಿಂದುಸ್ತಾನದಲ್ಲಿ ಚೆನ್ನಾಗಿ ಬೇರು ಬಿಟ್ಟದ್ದಿತು. ಚಕ್ರವರ್ತಿ ಅಶೋಕನಿಗೆ ಇದರ ಸಂಪೂರ್ಣ ಅರಿವಾಗಿದ್ದಿತು. ವ್ಯಕ್ತಿಶಃ ಅವನು ಬುದ್ಧಧರ್ಮದಅನುಯಾಯಿಯಾಗಿದ್ದನು ತನಗೆ ಪರಿಚಿತವಿದ್ದ ಜಗತ್ತಿನಲ್ಲೆಲ್ಲ ಬುದ್ಧ ಧರ್ಮದ ಸಂದೇಶವನ್ನು ಬೀರಬೇಕೆಂದೂ ಅವನು ಒಳ್ಳೆ ಉತ್ಸಾಹಿಯಾಗಿದ್ದನು. ಪಂಡಿತ ಜವಾಹರಲಾಲರು ಬರೆದ ಡಿಸ್ಕವರಿ ಆಫ್ ಇಂಡಿಯಾ ಪುಸ್ತಕದಲ್ಲಿ ಹೀಗೆ ಬರೆಯಲಾಗಿದೆ.

"ಅವನ ದೂತರು, ರಾಯಭಾರಿಗಳು ಸಿರಿಯಾ, ಇಜಿಪ್ತ, ಮೆಸಿಡೋನಿಯಾ, ಸಿರೆನೆ ಮತ್ತು ಎಪಿರಸ್ ಮೊದಲಾದವುಗಳಿಗೆ ಹೋಗಿ ಅವನ ಶುಭಾಶಯವನ್ನು ಮತ್ತು ಬುದ್ಧನ ಸಂದೇಶವನ್ನು ಬೀರಿದರು. ಅವರು ಮಧ್ಯಏಶಿಯಾ, ಬ್ರಹ್ಮದೇಶ ಮತ್ತು ಸಯಾಮಗಳಿಗೂ ಹೋದರು. ಅವನು ತನ್ನ ಮಗನಾದ ಮಹೇಂದ್ರನನ್ನು ಮತ್ತು ಮಗಳಾದ ಸಂಘಮಿತ್ರಾಳನ್ನು ದಕ್ಷಿಣದಲ್ಲಿ ಸಿಲೋನಕ್ಕೆ ಕಳಿಸಿದನು. ಹೋದಲ್ಲೆಲ್ಲ ಕೇವಲ ಹೃನ್ಮನಗಳಿಗೆ ಬಿನ್ನಹ ಮಾಡಲಾಗುತಿದ್ದಿತಲ್ಲದೆ ಎಲ್ಲಿಯೂ ಒತ್ತಾಯ, ಜುಲುಮೆ ನಡೆಯಲಿಲ್ಲ. ಬುದ್ಧನ ನಿಷ್ಠುರ ಅನುಯಾಯಿ ಅವನು ಆಗಿದ್ದರೂ ಉಳಿದ ಧರ್ಮಗಳಿಗೂ ಅವನು ಗೌರವ ಮತ್ತು ಮನ್ನಣೆಯನ್ನು ಕೊಡುತ್ತಿದ್ದನು. ಅವನು ಒಂದು ರಾಜಶಾಸನದಲ್ಲಿ ಹೀಗೆ ಘೋಷಿಸಿದನು.

"ಒಂದಿಲ್ಲೊಂದು ಕಾರಣಗಳಿಗಾಗಿ ಎಲ್ಲ ಧರ್ಮ ಪಂಥಗಳೂ ಗೌರವಾರ್ಹವಾಗಿವೆ. ಈ ರೀತಿ ವರ್ತಿಸುವದರಿಂದ ಮಾನವನು ತನ್ನ ಧರ್ಮವನ್ನು ಉನ್ನತ ಸ್ಥಾನಕ್ಕೆ ಒಯ್ಯುವನಲ್ಲದೆ ಅದೇ ಕಾಲಕ್ಕೆ ಪರಧರ್ಮಗಳ ಜನರ ಸೇವೆಯನ್ನು ಮಾಡುವನು" (ಪು ೧೪೫)

ಹಿಂದುಸ್ತಾನದ ಮೇಲೆ ದಾಳಿ ಮಾಡಿದ ಪ್ರಾಚೀನ ಮುಸಲ್ಮಾನರು ಅನುಭವಿಗಳಿಗಿಂತ ಹೆಚ್ಚು ಉತ್ಸಾಹಿಗಳೆ ಅದ್ದರಿಂದ ಸರಕಾರದ ಸಹಾಯದಿಂದಲೆ ಇಸ್ಲಾಮದ ಪ್ರಚಾರ ಮಾಡುವ ಮಾರ್ಗವನ್ನೆ ಸಾಮಾನ್ಯವಾಗಿ ಅನುಸರಿಸಿದರು. ಆದರೆ ಅವರು ಇಲ್ಲಿಯೆ ವಾಸಿಸಹತ್ತಿದಂತೆ ಸ್ವಲ್ಪ ವಿವೇಕಶೀಲರಾಗಹತ್ತಿದರು. ಆದರೆ ಸರಕಾರ ಮತ್ತು ಅಧಿಕಾರಿಗಳನ್ನೆಲ್ಲ ಸರ್ವಧರ್ಮಾತೀತವಿಡಬೇಕೆಂಬ ಜಾಣತನ ಅವರಲ್ಲಿ ಪೂರ್ಣವಾಗಿ ಸಮರಸವಾಗುವ ವೇಳೆಗೆ ಅವರ ಕೈಯಲ್ಲಿಯ ಅಧಿಕಾರ ಉಳಿದಿರಲಿಲ್ಲ. ತತ್ಪರಿಣಾಮವಾಗಿ ಧರ್ಮಕಾರ್ಯಕ್ಕಾಗಿ ಸರಕಾರದ ಸಹಾಯವನ್ನು ಪಡೆಯಬೇಕೆಂಬ ಅವರಮಹತ್ವಾಕಾಂಕ್ಷೆ ಇನ್ನೂ ಇರುತಿದೆ. ಇಸ್ಲಾಮದ ವಿಶಿಷ್ಟಸಂಸ್ಕೃತಿ ಮತ್ತು ಹಿತಸಂಬಂಧವೆಂದು ತಿಳಿದುಕೊಂಡದ್ದನ್ನೆಲ್ಲ ಪ್ರಚಾರ ಮಾಡುವದಕ್ಕಾಗಿಮುಸಲ್ಮಾನರುಳ್ಳ ಹಾಗು ಮುಸಲ್ಮಾನರೆ ಆಳುವ ಹಿಂದೀ ಮುಸಲ್ಮಾನ ರಾಜ್ಯವನ್ನು ಪ್ರಸ್ಥಾಪಿಸಬೇಕೆಂಬ ವಿಚಾರಮುಸ್ಲಿಂ ಲೀಗ ಧುರೀಣರ ಮನಸಿನಲ್ಲಿ ತುಂಬಿದೆ. ಅದರಂತೆಯೆ ಕೆಲ ಹಿಂದೂ ರಾಜಕಾರಣಿಗಳಲ್ಲಿಯೂ ಇದೇ ಬಗೆಯ ಮಹತ್ವಾಕಾಂಕ್ಷೆಯಿದೆ. ಈ ರೀತಿಯಾಗಿ ಚಾಣಕ್ಯ ನೀತಿ ಮತ್ತೆ ಧರ್ಮದಲ್ಲಿ ತಲೆಯೆತ್ತಿದೆ, ಬಂಗಾಲದಲ್ಲಿ ಮುಸ್ಲಿಂ ಲೀಗು ಈಗಾಗಲೆ ಸ್ವಲ್ಪ ಅಧಿಕಾರವನ್ನು ಪಡೆದಿದೆ. ಅದು ಸಂಪೂರ್ಣವಾಗಿ ಸಂಘಟಿತವಾಗುವ ಮೊದಲೆ, ಧಾರ್ಮಿಕ ತಳಹದಿಯ ಮೇಲಿರುವ ಸರಕಾರ ಜನತೆಯ ಜೀವನದ ಮೇಲೆ ಎಷ್ಟೊಂದು ಅತ್ಯಾಚಾರ ನಡೆಸಬಲ್ಲುದೆಂಬುದರ ಕಟು ಅನುಭವ ಈಗಲೆ ನಮಗೆ ಬಂದಿದೆ.

ಪರಧರ್ಮೀಯರು ಮೊದಲು ಮಾಡಿದ ಅತ್ಯಾಚಾರದ ಪ್ರತಿಕ್ರಿಯೆ ಬಿಹಾರ ಮತ್ತು ಉಳಿದ ಪ್ರಾಂತಗಳಲ್ಲಿ ನಡೆಯಿತು ಎಂಬ ನೆವ ಮುಂದೆ ಮಾಡಿ ಹಿಂದುಗಳೂ ಪಾರಾಗಿ ಹೋಗಲಾರರು. ಧರ್ಮದಲ್ಲಿ ಚಾಣಕ್ಯ ನೀತಿ ನಡೆದರೆ ಎಷ್ಟೊಂದು ಅಪಾಯವುಂಟಾಗುವದೆಂಬದರ ಹಿಂದಿನ ಅನುಭವ ಅವರಿಗೆ ಸಾಕಷ್ಟಿದೆ. ವಿರುದ್ಧ ಸರಕಾರ ಮತ್ತೊಂದು ಧರ್ಮವನ್ನು ಎತ್ತಿ ಹಿಡಿಯುವದರಿಂದ ಆ ಅಪಾಯಕ್ಕೆ ಯೋಗ್ಯ ಮದ್ದಾಗಲಾರದು. ಹಿಂದು ಧರ್ಮ ಮತ್ತು ಸಂಸ್ಕೃತಿಗಾಗಿ ಪ್ರಯತ್ನಿಸುತಿರುವ ಸರಕಾರ ಅದು ಅಖಂಡ ಹಿಂದುಸ್ತಾನವಿರಲಿ ಅಥವಾ ಖಂಡ ಹಿಂದುಸ್ತಾನವಾಗಿರಲಿ ಮುಸ್ಲಿಮ ಧರ್ಮ ಮತ್ತು ಸಂಸ್ಕೃತಿಗೆ ಬದ್ಧವಾದ ಪಾಕಿಸ್ತಾನಕ್ಕೆ ಉತ್ತರದಾಯಿಯಾಗಲಾರದು. ಇವೆರಡೂ ಶೀಖ ಕ್ರಿಶ್ಚನ್, ಝುರೊಸ್ಟ್ರಿಯನ್ ಮತ್ತು ಉಳಿದ ಧರ್ಮಗಳೊಡನೆ ಕೂಡಿಕೊಂಡು ಸರ್ವಸಾಮಾನ್ಯವಾದ ರಾಷ್ಟ್ರೀಯ ಅಥವಾ ಮಾನವೀಯ ಸಂಸ್ಕೃತಿ — ಹೆಚ್ಚು ಒಳಿತು-ಅಭಿವೃದ್ಧಿಯ ಮಾರ್ಗಗಳನ್ನು ಹುಡುಕಬೇಕು ಅಲ್ಲದೆ ಒಬ್ಬರಿಂದೊಬ್ಬರು ಬೇರ್ಪಾಟಾಗುವ ಮತ್ತು ಒಬ್ಬರನ್ನೊಬ್ಬರು ಬಹಿಷ್ಕರಿಸುವ ವೃತ್ತಿಯನ್ನು ಬಿಟ್ಟುಗೊಡಬೇಕು.

ವಾಪಿ ಕಿಶೋರಲಾಲ ಮಶ್ರೂವಾಲಾ

೨೬—೧೧—೧೯೪೬



## ಮಾಲವೀಯಜಿ ಮಹಾರಾಜ

'ರಾಜನು ಮೃತನಾದನು ರಾಜನು ಚಿರಾಯುಗಲೂ ಬದುಕಿರಲಿ' ಎಂಬುದಾಗಿ ಇಂಗ್ಲೀಷಿನಲ್ಲಿ ಒಂದು ನಾಣ್ನುಡಿಯುಂಟು. ಮಾಲವೀಯಜಿ ಮೃತರಾದರು, ಮಾಲವೀಯಜಿ ಅಮರರಾಗಲಿ ಎಂಬುದಾಗಿ ಭಾರತಭೂಷಣ ಮಾಲವೀಯಜಿ ಮಹಾರಾಜರ ಬಗ್ಗೆ ಹೇಳಲಾಗುತ್ತದೆ. ಹಿಂದುಸ್ತಾನಕ್ಕಾಗಿಯೇ ಮಾಲವೀಯಜಿಯವರು ಹುಟ್ಟಿ ಮತ್ತು ಹಿಂದುಸ್ತಾನಕ್ಕಾಗಿ ಮಾಡಿದ ಕಾರ್ಯದಿಂದ ಅಮರರಾಗಿರುವರು. ಅವರು ಮಾಡಿದ ಕಾರ್ಯ ವಿಪುಲವಾಗಿರುವುದು. ಬಹಳ ಪ್ರಚಂಡ ಕಾರ್ಯವನ್ನು ಅವರು ಮಾಡಿದರು. ಆ ಕಾರ್ಯಗಳಲ್ಲಿ ಎಲ್ಲಕ್ಕೂ ದೊಡ್ಡದೆಂದರೆ ಹಿಂದೂ ವಿಶ್ವವಿದ್ಯಾಲಯ. ನಾವು ಅದನ್ನು ಬನಾರಸ ಹಿಂದೂ ಯುನಿವರ್ಸಿಟಿಯೆಂದು ತಪ್ಪಾಗಿ ಕರೆಯುತ್ತೇವೆ. ಈ ತಪ್ಪು ಮಾಲವಿಯರದಲ್ಲ ಅವರ ಪರಿವಾರದವರದಿರುವದು. ಮಾಲವೀಯಜಿಯವರು ದಾಸಾನುದಾಸರಾಗಿದ್ದರು. ಕೈಕೆಳಗಿನಜನರು ಹೇಗೆಮಾಡಲಿಚ್ಛಿಸುತಿದ್ದರೊ ಹಾಗೆ ಅವರಿಗೆ ಮಾಡಗೊಡುತಿದ್ದರು. ಈ ಅನುಕೂಲತೆ ಅವರ ಸ್ವಭಾವದಲ್ಲಿ ವಿಶೇಷವಾಗಿದ್ದಿತೆಂಬುದು ನನಗೆ ಗೊತ್ತಿದೆ. ಅನೇಕ ಸಲ ಇದೊಂದು ದೋಷವಾಗಿಯೆ ಪರಿಣಮಿಸುತಿತ್ತು. ಆದರೆ ಸಮರ್ಥರಿಗೆ ಯಾವ ದೋಷವೂ ಬಾಧಿಸಲಾರದು. ಈ ಮಾತು ಮಾಲವೀಯಜಿಯವರಿಗೂ ಅನ್ವಯಿಸುವದು. ಅವರಿಗೆ ಪ್ರಿಯವಾದ ಹೆಸರು ಹಿಂದು ವಿಶ್ವವಿದ್ಯಾಲಯವೆಂದಿದ್ದಿತು ಮತ್ತು ಈ ಸುಧಾರಣೆಯನ್ನು ಈಗಲೂ ಮಾಡುವದವಶ್ಯ. ಈ ವಿಶ್ವವಿದ್ಯಾಲಯದ ಪ್ರತಿಯೊಂದು ಕಲ್ಲು ಕೂಡ ಹಿಂದೂಧರ್ಮದ ಪ್ರತಿಬಿಂಬವಾಗುವದವಶ್ಯವಾಗಿದೆ. ಯಾವ ಒಂದಾದರೂ ಕಟ್ಟಡವು ಪಾಶ್ಚಿಮಾತ್ಯ ಸಂಸ್ಕೃತಿಯ ಸಾಕ್ಷಿಯಾಗುಳಿಯಬಾರದು. ಅಧ್ಯಾತ್ಮದ ಸಾಕ್ಷಿಯಾಗಿರತಕ್ಕದ್ದು. ಆ ಕಟ್ಟಡಗಳಷ್ಟೆ ಹಾಗಾಗಬಾರದು; ಅದರ ಕೂಡ ಅಲ್ಲಿನ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಹಾಗಾಗತಕ್ಕದ್ದು. ಪ್ರತಿಯೊಬ್ಬ ವಿದ್ಯಾರ್ಥಿಯು ಶುದ್ಧ ಧರ್ಮದ ಸಜೀವ ಪ್ರತಿಮೆಯಾಗಿರುವನು. ಅವನು ಹಾಗಿಲ್ಲದಿದ್ದರೆ ಯಾಕಾಗಬಾರದು? ಈ ವಿಶ್ವವಿದ್ಯಾಲಯದ ಪರೀಕ್ಷೆ ವಿದ್ಯಾರ್ಥಿಗಳ ಸಂಖ್ಯೆಯನ್ನವಲಂಬಿಸುವದಿಲ್ಲ. ಆದರೆ ಅವರು ಹಿಂದು ಧರ್ಮದ ಪ್ರತಿಮೆ ಆಗುವುದರಲ್ಲಿಯೇ ಇದೆ. ಅಂಥ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಇದ್ದರೂ ನಡೆಯುವುದು.

ಈ ಕೆಲಸ ಕಠಿನವೆಂಬುದು ನನಗೆ ಗೊತ್ತಿದೆ. ಆದರೆ ಇದು ವಿಶ್ವವಿದ್ಯಾಲಯದ ತಳಹದಿಯಾಗಿರುವುದು. ಅದು ಹಾಗಿಲ್ಲದಿದ್ದರೆ ಬೇರೆ ಯಾವದೂ ಇರುವದಿಲ್ಲ. ಅದುದರಿಂದ ಸ್ವರ್ಗವಾಸಿ ಮಾಲವೀಯಜಿಯವರ ಮಕ್ಕಳ ಮತ್ತು ಅನುಯಾಯಿಗಳ ಧರ್ಮ ಸ್ಪಷ್ಟವಿರುವದು. ಜಗತ್ತಿನಲ್ಲಿ ಹಿಂದೂ ಧರ್ಮದ ಸ್ಥಾನವಾವುದು? ಮಾಲವೀಯಜಿ ಮಹಾರಾಜರ ಭಕ್ತರು ಇವೆಲ್ಲ ಪ್ರಶ್ನೆಗಳ ವಿಚಾರಮಾಡುವದುಕರ್ತವ್ಯವಾಗಿದೆ. ಮಾಲವೀಯಜಿಯವರು ಧರ್ಮಸ್ಮಾರಕವನ್ನು ಬಿಟ್ಟು ಹೋಗಿರುವರು. ಅದಕ್ಕೊಂದು ಶಾಶ್ವತ ಸ್ವರೂಪವನ್ನು ಕೊಡತಕ್ಕದ್ದು ಮತ್ತು ಅದರ ವಿಕಾಸಮಾಡತಕ್ಕದ್ದು ಅದೇ ಅವರ ಶ್ರೇಷ್ಠ ಸ್ಮೃತಿಸ್ತಂಭವಾಗಿರುವದು.

ವಿಶ್ವವಿದ್ಯಾಲಯಕ್ಕಾಗಿ ದಿ. ಮಾಲವೀಯಜಿಯವರು ಪರಿಶ್ರಮಪಟ್ಟು ಹಣವನ್ನು ಕಲೆ ಹಾಕಿರುವರು. ಇನ್ನೂ ಹಣವನ್ನು ಕಲೆಹಾಕಬೇಕಾಗಿದೆ. ಈ ಕಾರ್ಯದಲ್ಲಿ ಪ್ರತಿಯೊಬ್ಬನು ಮುಕ್ತಹಸ್ತದಿಂದ ಸಹಾಯ ಮಾಡಬಲ್ಲನು.

ಇದಾಯಿತು ಅವರ ಬಾಹ್ಯ ಪ್ರವೃತ್ತಿ. ಅವರ ಅಂತರ್ಜೀವನವು ವಿಶುದ್ಧವಾಗಿದ್ದಿತು. ದಯಾಭಾಂಡಾರರಾಗಿದ್ದರವರು. ಅವರ ಶಾಸ್ತ್ರೀಯ

—ಅನೇ ಪುಟಕ್ಕೆ

# ಟ್ರಾಕ್ಟರ ಮತ್ತು ರಸಾಯನಿಕ ಗೊಬ್ಬರ

೧೯೪೬ ನೆಯ ನವಂಬರ ತಿಂಗಳದ 'ರೂರಲ್ ಇಂಡಿಯಾ' ಪತ್ರಿಕೆಯಲ್ಲಿ ಜನಾಬ ಜಾಬಿರ ಎ. ಅಲ್ಲಿಯವರು ಬರೆದ ಬರೆಹವು ವಾಚನೀಯವಿದ್ದುದರಿಂದ ಅದರ ಅಂಶವನ್ನು ಉದ್ಧರಿಸಲಾಗಿದೆ.

ಹಿಂದುಸ್ತಾನದಲ್ಲಿ ರೆಂಟೆ ಮತ್ತು ದನಗಳ ಗೊಬ್ಬರದ ಉಪಯೋಗವನ್ನು ಒಕ್ಕಲತನದಕ್ಕೆ ಹಿಂದಿನಿಂದಲೂ ಮಾಡುವ ರೂಢಿಯ ಉಂಟು.... ನೂರಾರು ವರುಷಗಳಿಂದ ಇವು ಪರಿಣಾಮಕಾರಿ ಮತ್ತು ಉಪಯುಕ್ತವೆಂದು ಸಿದ್ಧವಾಗಿವೆ. ಇದೀಗ ಶಾಸ್ತ್ರಜ್ಞರು ಮತ್ತು ಕಾರಖಾನೆಗಾರರು ಮುಂದೆ ಬಂದಿರುವರು. ಕಬ್ಬಿಣ ರಂಟೆ ಮತ್ತು ರಸಾಯನಿಕ ಗೊಬ್ಬರದಿಂದ ಇವರು ನಮ್ಮ ಕಣ್ಣು ಕುಕ್ಕಿಸುತಿರುವರು. ಕೊನೆಗೆ ಬಂದವುದು ಸರ್ವಶಕ್ತ ಟ್ರಾಕ್ಟರು.... ಕಬ್ಬಿಣ ರೆಂಟೆ ಭೂಮಿಯೊಳಗೆ ೭-೮ ಇಂಚು ಹೋಗಿ ಒಳಗಿನ ಮಣ್ಣನ್ನು ಮೇಲೆ ತರುತ್ತದೆ. ಮೇಲೆ ಇದ್ದ ಈ ಸಾರವತ್ತಾದ ಮಣ್ಣು ಕೆಳಗಿನ ಸತ್ತ ಮಣ್ಣಿನಿಂದ ಕೂಡಿ ಹೋಗುವದರಿಂದ ಕಡಮೆ ಫಲವತ್ತಾಗುತ್ತದೆ. ಈ ಫಲವತ್ತತೆಯನ್ನು ಹೆಚ್ಚಿಸುವದಕ್ಕಾಗಿ ಕೃತ್ರಿಮ ಗೊಬ್ಬರದ ಉಪಯೋಗ ಮಾಡಲಾಗುತ್ತದೆ. ಆದರೆ ಭೂಮಿಯಲ್ಲಿಯ ಈ ನಿಃಸಾರತೆಯನ್ನು ಹೋಗಲಾಡಿಸುವದಕ್ಕಾಗಿ ಸಾರವತ್ತಾದ ಮಿಶ್ರಿತ ಗೊಬ್ಬರವನ್ನೆ ಹಾಕುವದವಶ್ಯವಾಗಿದೆ. ಇದೀಗ ದನಗಳ ಗೊಬ್ಬರ ಮೊದಲಿನಿಗಿಂತ ಹೆಚ್ಚು ದುರ್ಮಿಲವಾಗಿದ್ದರಿಂದ ಮಣ್ಣು ನಿಃಸಾರವಾಗುತ್ತದೆ. ಮತ್ತು ಲಾಭದಾಯಕ ಒಕ್ಕಲತನಕ್ಕೆ ಅಯೋಗ್ಯವಾಗುತ್ತದೆ. ಅಮೇರಿಕೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಹೀಗೆಯೆ ಆಯಿತು. ೧೨-೧೪ ಇಂಚು ಆಳ ಭೂಮಿಯನ್ನು ಟ್ರಾಕ್ಟರು ಊಳುವದರಿಂದ ಒಕ್ಕಲತನಕ್ಕೇನೊ ಉತ್ತೇಜನ ದೊರೆತಂತಾಗುತ್ತದೆ. ಮತ್ತು ಕೆಲಸವೂ ಬೇಗ ಸಾಗುತ್ತದೆ. ಇದರಿಂದ ದಡ್ಡಿಗಳಲ್ಲಿ ದನಗಳೇ ಇಲ್ಲದಂತಾಗಿದೆ. ದನಗಳ ಗೊಬ್ಬರದ ಅಭಾವವೆನಿಸಹತ್ತಿದೆ. ಈ ಗೊಬ್ಬರಕ್ಕೆ ಸರಿಹೋಗುವ ಬೇರೆ ಯಾವ ಗೊಬ್ಬರವೂ ಇರುವದಿಲ್ಲ... ಹಿಂದುಸ್ತಾನದಲ್ಲಿ ಟ್ರಾಕ್ಟರ ಮತ್ತು ರಸಾಯನಿಕ ಗೊಬ್ಬರ ಅದೊಂದು ಬಗೆಯ ದೊಡ್ಡಸ್ತನದ ಲಕ್ಷಣವಾಗಹತ್ತಿದೆ ಅದು ಅತ್ಯಧುನಿಕ ಒಕ್ಕಲತನದ ಪ್ರತೀಕವೆಂದು ತಿಳಿಯಲಾಗುತ್ತದೆ. ಇದು ಘಾತಕವಾದದ್ದು. ಟ್ರಾಕ್ಟರದಿಂದ ಬಲು ಬೇಗ ಆಗುವ ಕೆಲಸ ಮತ್ತು ರಸಾಯನಿಕ ಗೊಬ್ಬರದ ತಾತ್ಕಾಲಿಕ ಪರಿಣಾಮ ಅತ್ಯಂತ ಮೋಹಕವಾಗಿವೆ ಆದುದರಿಂದ ಆಳವಾಗಿ ವಿಚಾರ ಮಾಡಲು ಮತ್ತು ಇದೊಂದು ಬಗೆಯ ಮೋಹವೋ ಎಂಬ ಬಗ್ಗೆ ಮನವರಿಕೆ ಮಾಡಿಕೊಳ್ಳಲು ಕೂಡ ಯಾರೂ ಮನಸು ಮಾಡುವದಿಲ್ಲ.

ನಾವು ಟ್ರಾಕ್ಟರಗಳನ್ನುಪಯೋಗಿಸಲಿ ಉಪಯೋಗಿಸದಿರಲಿ. ಒಂದು ಮಾತು ಮಾತ್ರ ಸುಸ್ಪಷ್ಟವಿದೆ. ಭೂಮಿಯ ಫಲವತ್ತತೆಯನು ಕಾಯ್ದುಕೊಳ್ಳುವುದಕ್ಕಾಗಿ ದೊಡ್ಡ ಪ್ರಮಾಣದಲ್ಲಿ ಮಿಶ್ರಿತ ಗೊಬ್ಬರದ ಉಪಯೋಗ ಮಾಡುವದು ಒಕ್ಕಲತನದಲ್ಲಿ ಅಪರಿಹಾರ್ಯವಾಗಿದೆ. ಮಿಶ್ರಿತ ಗೊಬ್ಬರ ಮಾಡುವದೇನೊ ರೂಢಿಯಲ್ಲಿದೆ ಆದರೆ ಅದನ್ನು ಸಾಕಷ್ಟು ಚೆನ್ನಾಗಿ ತಿಳಿದುಕೊಂಡಿಲ್ಲ. ಇಲ್ಲವೆ ದೊಡ್ಡ ಪ್ರಮಾಣದಲ್ಲಿಯೂ ಅದು ರೂಢಿಯಲ್ಲಿ ಬಂದಿರುವದಿಲ್ಲ. ರಾಷ್ಟ್ರೀಯ ಸರಕಾರದವರು ಪ್ರಚಾರ ಮೂಲಕ, ಮಿಶ್ರಿತ ಗೊಬ್ಬರವನ್ನು ಪೂರೈಸಿ ಒಕ್ಕಲಿಗರಿಗೆ ಅಮೂಲ್ಯ ಸಹಾಯವನ್ನು ಸಲ್ಲಿಸಬಲ್ಲರು. ಬೇಕಾದಷ್ಟು ಸಸ್ಯಗಳು, ದನಗಳ ಹೊಲಸು ಹಿಂಡಿ, ಎಲ್ಲ ಬಗೆಯ ಕಟ್ಟಿಗೆ ಮೊದಲಾದವುಗಳೆಲ್ಲ ಹೆಚ್ಚು ಪ್ರಮಾಣದಲ್ಲಿ ಇದೀಗ ಹಾಳಾಗುತಿರುವವು. ಹಲವು ಸಲ ಇವೆಲ್ಲ ನಮಗೆ ಪೀಡೆಯನ್ನೂ ಕೊಡುತಿರುವವು. ಇವೆಲ್ಲ ಅಮೂಲ್ಯ ಪದಾರ್ಥಗಳನ್ನು ಸಮ್ಮಿಶ್ರಗೊಳಿಸಿ ಹಂಚತಕ್ಕದ್ದು. ನಗರಗಳಲ್ಲಿಯ ಹೊಲಸನ್ನೆಲ್ಲ ಮುನಸಿಪಾಲಟಿಯವರು ಉಪಯೋಗಿಸಬೇಕು. ಅಲ್ಲದೆ ದೊಡ್ಡ ನಗರಗಳ ಸುತ್ತಲೂ ಹಿಂಡುವ ದನಗಳು ಹೆಚ್ಚು ಪ್ರಮಾಣದಲ್ಲಿ ಇರುವವು. ಅವುಗಳ ಸಗಣಿ ಮೂತ್ರವನ್ನು ಸಮ್ಮಿಶ್ರಗೊಳಿಸಬೇಕು. ಇದರಿಂದ ಹೆಚ್ಚು ಆಹಾರವನ್ನು ನಾವು ಬೆಳೆಯಬಲ್ಲೆವು. ಇಷ್ಟೇ ಅಲ್ಲ, ಪೌಷ್ಟಿಕ ಆಹಾರವನ್ನೂ ಬೆಳೆಯಬಲ್ಲೆವು.

ಈ ಪರಿಸ್ಥಿತಿಯಲ್ಲಿ ನಮ್ಮ ದೊಡ್ಡ ನಾಯಿಟ್ರೊಜನ ಫರ್ಟಿಲಾಯಿಜರ ಯಂತ್ರಗಳ ಗತಿಯೇನು? ರಸಾಯನಿಕ ದ್ರವ್ಯಗಳನ್ನು ಯಾವಾಗಲೂ ಸಣ್ಣ ಪ್ರಮಾಣದಲ್ಲಿ ಉಪಯೋಗಿಸಬೇಕು ಅವುಗಳ ಉಪಯುಕ್ತತೆಯೂ ಇದೆ. ಆದರೆ ಒಂದೇ ಸವನೆ ದೊಡ್ಡ ಪ್ರಮಾಣದಲ್ಲಿ ಅವುಗಳ ಉಪಯೋಗ ಮಾಡಿದರೆ ಕೊನೆಯಲ್ಲಿ ಅವುಗಳಿಂದ ಅಪಾಯಕಾರಕ ಪರಿಣಾಮವುಂಟಾಗುವದೆಂಬಲ್ಲಿ ನನಗಂತೂ ಸಂಶಯವಿಲ್ಲ. ಆದರಿಂದ ಮಣ್ಣಿನ ಮೇಲೆ ದುಷ್ಪರಿಣಾಮವಾಗಿ ಬಹಳ ಹಾನಿಯುಂಟಾಗುವದು. ಮಣ್ಣಿನಲ್ಲಿ ಅವಶ್ಯವಾಗಿ ಬೆಳೆಯಬೇಕಿದ್ದ ವಸ್ತುಗಳ ಮೇಲೆ ಅವು ದುಷ್ಪರಿಣಾಮವನ್ನುಂಟುಮಾಡುವವು. ಹಲ ಪ್ರಸಂಗಗಳಲ್ಲಿ ಅವು ಉಪಯುಕ್ತವಿರುವವೆಂದು ನಾವು ಹೇಳಬಹುದು. ಸಸ್ಯಗಳಿಗೆ ನಿತ್ಯದ ಆಹಾರ ಆವಾಗಲಾರವು. ಸರ್ ಅಲ್ಬರ್ಟ ಹಾವರ್ಡರು ಬರೆದುದನ್ನು ಉದ್ಧರಿಸುವಾ.

"ರೋಗದ ಪ್ರಮಾಣ ಮಿತಿಮೀರಿದ್ದು ಒಕ್ಕಲಿಗನಿಗೆ ಒಳ್ಳೆ ವಿವಂಚನೆಗೆ ಕಾರಣವಾಗಿದೆ. ಈ ಅಸಮಾಧಾನಕರ ಪರಿಸ್ಥಿತಿಯ ಅರಿವು ಸಾರ್ವಜನಿಕರಿಗೆ ಸಾಕಷ್ಟಿರುವದಿಲ್ಲ. ಒಕ್ಕಲತನಶಾಸ್ತ್ರದ ಪರಿಣಾಮಗಳೆಂದು ಹೇಳುವದಾದರೆ ಅವೇನು ಪ್ರೋತ್ಸಾಹಕರವಾಗಿರುವದಿಲ್ಲ. ನಿಜವಾಗಿಯೂ ಅವು ಮುಂದಟ್ಟ ಮಾಡುವಂಥವಿರುವದಿಲ್ಲ. ನಿಶ್ಚಿತವಾಗಿ ಅವು ಕಳೆದ ೬೦—೫೦ ವರ್ಷಗಳಿಂದ ನಡೆದುಬಂದವುಗಳು. ಕೃತಕಗೊಬ್ಬರದ ಆಧುನಿಕ ಉಪಯೋಗದ ಜತೆಯಲ್ಲಿಯೆ ಅವು ಸಾಗಿವೆ. ಲೇಬಿಗ್‌ರವರ ಮಣ್ಣಿನ ರಸಾಯನಿಕ ದ್ರವ್ಯಗಳ ಸಂಶೋಧನೆಯ ಮರುಪಯೋಗದಿಂದ ಕೃತಕ ಗೊಬ್ಬರದ ಉತ್ಪತ್ತಿಯಾಗಿದೆ. ಅಲ್ಲದೆ ಯಂತ್ರಗಳ ಸಂಶೋಧನೆಯಿಂದ ಒಕ್ಕಲಿಗನಿಗೆ ಅಪರಿಹಾರ್ಯವೆಂದೆನಿಸಿದ್ದರಿಂದಲೂ ಕೃತ್ರಿಮಗೊಬ್ಬರದ ಉತ್ಪಾದನೆಯಾಯಿತು."

ಜಗತ್ತಿನಲ್ಲಿನ ವಿಶೇಷತೆ: ಅಮೇರಿಕೆಯಲ್ಲಿಯ ಅನುಭವದಿಂದ ಆಳವಾಗಿ ಊಳಿದನಂತರ ಕೃತಕ ಗೊಬ್ಬರವನ್ನು ಮಾನಸ್ವೀ ಹಾಕುವದರಿಂದ ಲಕ್ಷಾವಧಿ ಎಕರೆ ಅತ್ಯುತ್ತಮ ಭೂಮಿ ನಿಸ್ಸಾರವಾಗಿದೆಂದು ಕಂಡುಬಂದಿದೆ. ಪ್ರತಿಯೊಂದು ಸಂದರ್ಭದಲ್ಲಿಯೂ ಸಾರವತ್ತಾದ ಮಣ್ಣಿನ ಅಭಾವವೆ ಮೂಲ ಕಾರಣವೆಂದು ಗೊತ್ತಾಗಿದೆ. ನಮ್ಮ ದೇಶ ಪಾಶ್ಚಾತ್ಯಪದ್ಧತಿಯಂತೆ ಪ್ರಗತಿಪಥದಲ್ಲಿ ಸಾಗಿದ ಇದೀಗ ಪ್ರಗತಿಯ ಹೊಸ್ತಿಲಲ್ಲಿರುವೆವು. ಆಧುನಿಕ ಪಾಶ್ಚಾತ್ಯ ಒಕ್ಕಲಿಗರು ಯಾವತಗ್ಗಿನಲ್ಲಿ ಬಿದ್ದರೋ ಅಂಥ ತೆಗ್ಗಿನಲ್ಲಿ ನಾವಾದರೂ ಬೀಳಬಾರದೆಂದು ಆಶಿಸುವಾ. ಉಳಿದ ಹಲವು ದೇಶಗಳಲ್ಲಿಯಂತೆ ನಮಗೇನು ಪ್ರಾಣಿಗಳ ಗೊಬ್ಬರ ಸಿಕ್ಕುವದಿಲ್ಲವೆಂತಲ್ಲ. ನಮಗೆ ಬೇಕಾದ ಎಲ್ಲ ಬಗೆಯ ನೈಸರ್ಗಿಕ ಗೊಬ್ಬರ ನಮ್ಮಲ್ಲಿದೆ. ಆದರೆ ಯೋಗ್ಯ ರೀತಿಯಿಂದ ಅದರ ಉಪಯೋಗ ಮತ್ತು ಹಂಚಿಕೆ ಮಾಡಬೇಕಾಗಿದೆ. ಇದೇ ಮುಖ್ಯ ಕರ್ತವ್ಯ. ಅತ್ಯಂತ ದಕ್ಷ ಸಂಸ್ಥೆಯನ್ನು ಸಂಸ್ಥಾಪಿಸಬೇಕೆಂದೂ ಮಿಶ್ರಿತ ಗೊಬ್ಬರದ ವ್ಯವಸ್ಥೆ ಮಾಡಬೇಕೆಂದೂ ನಾವು ಸರಕಾರವನ್ನು ಬಿನ್ನವಿಸಿಕೊಳ್ಳಬೇಕಾಗಿದೆ. ಅಲ್ಲದೆ ಈಗ ಹೊರಗೆ ಹೋಗುತ್ತಿರುವ ಹಿಂಡಿ ಎಲುಬು ರಕ್ತ ಮುಂತಾದ್ದನ್ನೆಲ್ಲ ಹಿಂದುಸ್ತಾನದಲ್ಲಿಯೆ ಉಳಿಯುವಂತೆ ಮಾಡಬೇಕಾದುದೂ ಸರಕಾರದ ಕರ್ತವ್ಯವಾಗಿದೆ.

ಪುಣೆ ೨—೧೨—೪೬

---

# ಜಾತಿ, ಧರ್ಮದ ಹಣೆಪಟ್ಟಿ

ಪತ್ರಲೇಖಕರೊಬ್ಬರು ಕೆಳಗಿನಂತೆ ಬರೆಯುತ್ತಾರೆ—

" ಸಾರಸ್ವತ ಬ್ರಾಹ್ಮಣನು; ಮತ್ತು ಶೈವ ಹಿಂದು ಎಂದು ನನ್ನನ್ನು ಕರೆಯಲು ಜನ ಒತ್ತಾಯ ಪಡಿಸುತ್ತಾರೆ. ಯಾವನೊಬ್ಬ ಅಧಿಕಾರಿಯ ಎದುರಿಗೆ ಹೋಗುವ ಸಮಯ ಬಂದಾಗ ಅಥವಾ ಸಾರ್ವಜನಿಕ ಕಾಗದದಲ್ಲಿ ಉಲ್ಲೇಖಿಸಬೇಕಾದಾಗ ನನ್ನ ಜಾತಿ ಧರ್ಮವನ್ನು ಕೇಳಲಾಗುತ್ತದೆ. ಪರಮಾತ್ಮನಲ್ಲಿ ನನಗೆ ವಿಶ್ವಾಸವಿದೆ. ಬಾಲ್ಯದಿಂದ ಶಿವ, ಶಂಕರ, ಮಹಾದೇವ ಎಂಬ ನಾಮಗಳಿಂದ ಅವನ ನಾಮಸ್ಮರಣ ನಾನು ಮಾಡುತ್ತಿದ್ದರೂ ಈಗ ಬ್ರಾಹ್ಮಣ ಅದರಲ್ಲಿಯೂ ಸಾರಸ್ವತ ಬ್ರಾಹ್ಮಣ ಎಂದು ಕರೆಯಿಸಿಕೊಳ್ಳುವ ಇಚ್ಛೆ ನನಗೆ ಎಳ್ಳಷ್ಟೂ ಇರುವದಿಲ್ಲ. ಶೈವನೆಂದು ಅಥವಾ ಹಿಂದು ಎಂದು ಕೂಡ—ನಾನು ಈಗ ಕರೆದುಕೊಳ್ಳುವದಿಲ್ಲ. ಆದರೆ ಯಾವದೊಂದು ಧರ್ಮ ಪಂಥಕ್ಕೆ ಸೇರದಿದ್ದ ಒಬ್ಬ ಆಸ್ತಿಕ ಎಂದು ಭಾವಿಸುತ್ತೇನೆ. ಆದರೆ ಸಮಾಜದವರು ನನ್ನ ಹಣೆಯಮೇಲೆ ಅಂಟಿಸಿದ ಪಟ್ಟಿಯನ್ನು ತೆಗೆದ ಹಾಕಲು ಇಲ್ಲವೆ ನಿರಾಕರಿಸಲು ನಾನೇನು ಮಾಡಬೇಕು."

ಸಾರ್ವಜನಿಕ ಅಧಿಕಾರಿಗಳು ಮತ್ತು ಕಾಗದ ಪತ್ರಗಳ ಬಗ್ಗೆ ಹೇಳುವುದಾದರೆ, ಈ ಪತ್ರಲೇಖಕನು ತನ್ನ ಜಾತಿ ಶೂನ್ಯವೆಂದು ಹೇಳಬಹುದು. ಧರ್ಮ ಆಸ್ತಿಕ ಎಂದು ಹೇಳಬಹುದು. ಸಾರ್ವಜನಿಕ ಕಾಗದಪತ್ರಗಳಲ್ಲಿ ಮತ್ತು ಅಧಿಕಾರಿಗಳ ಎದುರಿನಲ್ಲಿ ಜಾತಿ ಧರ್ಮವನ್ನು ಉಲ್ಲೇಖಿಸುವ ನಿಯಮಗಳನ್ನು ತೆಗೆದು ಹಾಕುವದು ಸರಕಾರದವರಿಗೆ ಕದಾಚಿತ್ ಶಕ್ಯವಾಗಿದೆ.

ಆದರೆ ಇಷ್ಟಿಗೆ ಈ ವಿಷಯ ಮುಗಿಯಲಿಲ್ಲ. ವ್ಯವಹಾರದಲ್ಲಿ ಅದನ್ನು ತರದೆ ಕೇವಲ ನಾನು ನನ್ನ ಜಾತಿ ಧರ್ಮಗಳನ್ನೆಲ್ಲ ಬಿಟ್ಟುಗೊಟ್ಟಿದ್ದೇನೆ ಎಂದು ಘೋಷಿಸಿದ ಮಾತ್ರಕ್ಕೆ ಸಮಾಜವು ಅವನನ್ನು ದೂರಿರಿಸಲಾರದು. ತನ್ನದಲ್ಲದ ಜಾತಿ ಧರ್ಮದ ಬಹುಸಂಖ್ಯಾಕ ಜನರೊಡನೆ ಕೌಟುಂಬಿಕ ಮತ್ತು ಸಾಮಾಜಿಕ ಸಂಬಂಧವನ್ನು ಇವನು ಬೆಳೆಸಿಕೊಂಡಿರುವನೊ? ಅವನ ಸಂಬಂಧವೆಲ್ಲ ಕೇವಲ ತನ್ನ ಪ್ರಸಿದ್ಧ ಜಾತಿ ಧರ್ಮಕ್ಕೆಮಾತ್ರ ಮಿತವಾಗಿದ್ದರೆ ಸಾರ್ವಜನಿಕರೇಕೆ, ಅವನ ಕುಟುಂಬದವರು ಕೂಡ ಇವನು ಈಗಲೂ ಇಂಥ ಜಾತಿ, ಧರ್ಮಕ್ಕೆ ಸೇರಿದವನೆಂಬದನ್ನು ಮರೆಯಲಾರರು. ಅವನು ತನ್ನವಿರುದ್ಧ ಎಷ್ಟು ಹೇಳಿದರೂ ಅಶಾಸ್ತ್ರೀಯ ರೀತಿಯಲ್ಲಿಯಾದರೂ ಇವನು ಇಂಥ ಜಾತಿ ಧರ್ಮದವನೆಂದು ಕರೆಯದೆ ಬಿಡಲಾರರು. ಆದರೆ ಅವನ ಸದುದ್ದೇಶವು ಯೋಗ್ಯ ರೀತಿಯಲ್ಲಿ ವ್ಯವಹಾರದಲ್ಲಿಯೂ ಇಳಿದದ್ದಾದರೆ ಸಕಾಲದಲ್ಲಿ ಫಲಕಾರಿಯಾಗಬಹುದು.

ದಾಯಾದಭಾಗ, ಉತ್ತರಾಧಿಕಾರ, ವಿವಾಹ, ವಿವಾಹವಿಚ್ಛೇದ ಮೊದಲಾದವುಗಳಲ್ಲಿ ಆಯಾ ಧರ್ಮಗಳ ವಿಧಿಗನುಸಾರವಾಗಿ ನ್ಯಾಯಾಲಯಗಳಲ್ಲಿ ಕಾರ್ಯಕಲಾಪಗಳು ನಡೆಯಬೇಕಾಗುವದರಿಂದ ಮತ್ತು ವಿವಿಧ ಜಾತಿಯವರು ತಮ್ಮ ವಿಶಿಷ್ಟ ಸಂಪ್ರದಾಯ ರೂಢಿಗಳನ್ನು ಮನ್ನಿಸಲೆಬೇಕೆಂದು ಆಗ್ರಹ ತಳೆಯುವದರಿಂದ ಸಾರ್ವಜನಿಕ ಕಾಗದ ಪತ್ರಗಳಲ್ಲಿ ಮತ್ತು ಸರಕಾರಿ ಅಧಿಕಾರಿಗಳ ಸಮಕ್ಷಮದಲ್ಲಿ ಜಾತಿ ಧರ್ಮವನ್ನು ಹೇಳಬೇಕಾಗುವದು. ಇಲ್ಲದಿದ್ದರೆ ಅದಕ್ಕೊಂದು ಮಹತ್ವ ಬರುತ್ತಿದ್ದಿಲ್ಲೆಂಬುದನ್ನು ನೆನಪಿನಲ್ಲಿಡಬೇಕಾಗಿದೆ. ತತ್ಪರಿಣಾಮವಾಗಿ ಯಾವನೊಬ್ಬ ವ್ಯಕ್ತಿಯು ತನ್ನ ಜಾತಿ ಧರ್ಮವನ್ನು ಒಪ್ಪಲಿ, ಬಿಡಲಿ ಅವನ ಅಪ್ತರು ಮತ್ತು ಸುತ್ತಲಿನ ಸಮಾಜದವರು ಇವೆಲ್ಲ ವಿವರಗಳು ಕಾಗದಪತ್ರಗಳಲ್ಲಿ ಇರಬೇಕೆಂದು ಆಗ್ರಹಪಡುವದುಂಟು. ಇಂಥ ವಿಷಯಗಳಲ್ಲಿ ವಿಶಿಷ್ಟ ಧರ್ಮ ಜಾತಿಗಳ ರೂಢಿ ಸಂಪ್ರದಾಯದ ಕಾಯದೆಗಳು ತನ್ನ ಮತ್ತು ತನ್ನ ಆಪ್ತೇಷ್ಟರ ವಿಷಯಕ್ಕೆ ಅನ್ವಯಿಸದೆ ಇಂಡಿಯನ್ ಸಕ್ಸೇಶನ್ ಆ್ಯಕ್ಟ ಮೊದಲಾದ ಕಾಯದೆಗಳು ತನಗೆ ಅನ್ವಯಿಸಬೇಕು ಎಂದು ಹೇಳಲ್ಪ ಯಾವನೊಬ್ಬ ವ್ಯಕ್ತಿಗೆ ಅಧಿಕಾರವಿದೆಂಬುದಾಗಿ ಕಾಯದೆಯಲ್ಲಿ ತಿದ್ದುಪಡಿಮಾಡುವದವಶ್ಯವಿದೆಯೊ ಹೇಗೆಂದು ಸುಧಾರಕರು ಮತ್ತು ಶಾಸನ ಸಭೆಗಳು ವಿಚಾರಮಾಡುವದವಶ್ಯವಾಗಿದೆ.

ವಾಪಿ ಕಿಶೋರಲಾಲ ಮಶ್ರೂವಾಲಾ

೫—೧೨—೪೬

# ಉರುಳಿ ಕಾಂಚನದ ವರದಿ

ಗಾಂಧೀಜಿಯವರು ಕಳೆದ ಮಾರ್ಚ ತಿಂಗಳ ಕೊನೆಯಲ್ಲಿ ಪುಣೆಯ ಹತ್ತಿರ ಉರುಳಿಕಾಂಚನದಲ್ಲಿ ಸಂಸ್ಥಾಪಿಸಿದ ನಿಸರ್ಗ ಚಿಕಿತ್ಸಾಲಯದ ಮೇಲ್ವಿಚಾರಕರಾದ ಡಾ. ಭಾಗವತರು ತಮ್ಮ ಮತ್ತು ಸಹೋದ್ಯೋಗಿಗಳ ಕಾರ್ಯದ ಷಾಣ್ಮಾಸಿಕ (ಎಪ್ರಿಲದಿಂದ ಸಪ್ಟೆಂಬರ ೧೯೪೬) ವರದಿಯನ್ನು ಕಳಿಸಿರುವರು. ಅದರ ಈ ಸಂಕ್ಷಿಪ್ತ ವರದಿಯಿಂದ ಅಲ್ಲಿ ನಡೆದ ಚಟುವಟಿಕೆಗಳ ಪರಿಚಯ ವಾಚಕರಿಗೆ ಆಗುವದು.

ವಾಪಿ ಕಿಶೋರಲಾಲ ಮಶ್ರೂವಾಲಾ

೭—೧೨—೪೬

ಗಾಂಧೀಜಿಯವರು ಮಾರ್ಚ ೩೪ನೇ ತಾರೀಕು ಈ ಕೇಂದ್ರವನ್ನು ಸ್ಥಾಪಿಸಿದರು. ಒಂದು ವಾರದವರೆಗೆ ಮಾತ್ರ ಅವರು ಪ್ರತ್ಯಕ್ಷವಾಗಿ ಅದರ ಕಾರ್ಯಕಲಾಪಗಳನ್ನು ನೋಡಿಕೊಂಡರು. ಅನಂತರ ಅದರ ಹೊಣೆಯನ್ನು ನನ್ನ ಮತ್ತು ನನ್ನ ಸಹೋದ್ಯೋಗಿಗಳ ಮೇಲೆ ಹೊರಿಸಲಾಯಿತು. ಗಾಂಧೀಜಿಯವರು ಇಲ್ಲಿ ಇರುವಾಗ ರೋಗಿಗಳ ಸಂಖ್ಯೆ ದಿನಾಲು ಹೆಚ್ಚುತಲೆ ಇದ್ದಿತು. ಆದರೆ ಅವರು ಇಲ್ಲಿಂದ ಹೋದ ಬಳಿಕ ಅದು ಬಹಳ ಕುಗ್ಗಿತು. ರೋಗಿಗಳ ಪ್ರತ್ಯಕ್ಷಚಿಕಿತ್ಸೆ ಎಪ್ರಿಲ ಎರಡನೆ ವಾರದಿಂದ ಪ್ರಾರಂಭವಾಯಿತು. ಮೇ ಮತ್ತು ಜೂನ ತಿಂಗಳಲ್ಲಿ ಒಂದೇ ಸವನೆ ನಡೆಯಿತು. ಮಳೆಗಾಲ ಪ್ರಾರಂಭವಾದ ನಂತರ ರೋಗಿಗಳ ಸಂಖ್ಯೆ ಕಡಿಮೆಯಾಗುತ್ತಲೆ ನಡೆಯಿತು ಮಳೆಗಾಲದಲ್ಲಿ ಹಳ್ಳಿಗರೆಲ್ಲ ಹೊಲಗಳು ಕೆಲಸದಲ್ಲಿ ತೊಡಗಿದ್ದರಿಂದ ಮತ್ತು ವಾಹನ ಸೌಕರ್ಯಗಳು ಇಲ್ಲದ್ದರಿಂದ ರೋಗಿಗಳ ಸಂಖ್ಯೆ ಕರಗಲು ಕಾರಣವಾಯಿತು.

ಈ ಕೇಂದ್ರದಲ್ಲಿ ಚಿಕಿತ್ಸೆ ಹೊಂದಿದ ರೋಗಿಗಳು ಒಟ್ಟು ಸಂಖ್ಯೆ ೫೭೭. ಅವರಲ್ಲಿ ೩೩ ರೋಗಿಗಳ ಪರಿಸ್ಥಿತಿ ಬಹಳ ಕಠಿನವಿದ್ದುದರಿಂದ ಅವರನ್ನು ಆಸ್ಪತ್ರೆಯಲ್ಲಿಯೆ ಇಟ್ಟುಕೊಂಡು ಚಿಕಿತ್ಸೆ ಮಾಡಲಾಯಿತು. ಹಡೆಯಲಿದ್ದ ಓರ್ವ ಹೆಣ್ಣುಮಗಳ ಚಿಕಿತ್ಸೆಯನ್ನೂ ಯಶಸ್ವಿಯಾಗಿ ಮಾಡಲಾಯಿತು. ಹತ್ತು ಕಿರುಕಳ ಶಸ್ತ್ರಕ್ರಿಯೆಗಳನ್ನು ಮಾಡಲಾಯಿತು. ಉಳಿದವರಿಗೆಲ್ಲ ರೇಚಕ, ಸ್ನಾನ, ಕಟಿಸ್ನಾನ ಮೊದಲಾದ ಚಿಕಿತ್ಸೆ ಪಡಲಾಯಿತು. ಮನೆಯಲ್ಲಿ ಕೆಲ ಪಥ್ಯ ಮಾಡಲು ಅವರಿಗೆ ವಿಧಿಸಲಾಯಿತು. ಮೇಲೆ ಹೇಳಿದ ಒಟ್ಟು ರೋಗಿಗಳಲ್ಲಿ ಸುಮಾರು ೩೦೦ ಜನರು ಪೂರ್ಣ ಗುಣವಾಗುವವರೆಗೆ ಎಲ್ಲ ಬಗೆಯ ಚಿಕಿತ್ಸೆಯನ್ನು ಹೊಂದಿದರು. ನಾವು ಯಾವದೇ ಔಷಧವನ್ನು ಕೊಡಲಿಲ್ಲೆಂದೂ ಕಠಿಣ ಪಥ್ಯವನ್ನು ಹೇಳಿದೆವೆಂದೂ ಮುಂತಾದ್ದಕ್ಕಾಗಿ ಉಳಿದವರು ಚಿಕಿತ್ಸೆ ಮಾಡಿಕೊಳ್ಳದೆ ಹೋದರು.

ಶುದ್ಧ ನೀರಿನ ರೇಚಕ, ಕಟಿಸ್ನಾನ, ಸಾದಾ ಸ್ನಾನ, ತಣ್ಣಗಿನ ಇಲ್ಲವೆ ಬಿಸಿಪೋಟೇಸು, ಮತ್ತು

( ೧೦ ನೇ ಪುಟ ನೋಡಿರಿ )

---

( ೭ ನೇ ಪುಟದಿಂದ )

ಜ್ಞಾನ ಅಪಾರವಾಗಿದ್ದಿತು. ಭಾಗವತ ಅವರಿಗೆ ಪ್ರಿಯಗ್ರಂಥ. ಅವರು ಒಳ್ಳೆ ಪ್ರವಚನಕಾರರಾಗಿದ್ದರು. ಅವರ ಸ್ಮರಣಶಕ್ತಿ ಬಹಳ ತೇಜಸ್ವಿಯಾಗಿದ್ದಿತು. ಜೀವನ ಶುದ್ಧವಾಗಿದ್ದಿತು; ಸಾದಾ ಇದ್ದಿತು.

ರಾಜನೀತಿಯ ಮತ್ತು ಉಳಿದ ಅನೇಕ ಅವರ ಪ್ರವೃತ್ತಿಗಳನ್ನು ನಾನು ಬಿಟ್ಟುಗೊಡುವೆನು. ತಮ್ಮ ಜೀವನವನ್ನೆಲ್ಲ ಸೇವೆಗಾಗಿಯೆ ಮುಡಿಪಾಗಿಟ್ಟರವರು, ಅತ್ಯಂತ ಬುದ್ಧಿವಂತ ಮತ್ತು ಸಮರ್ಥ ಜನರ ಚಟುವಟಿಕೆಗಳಿಗೆ ಮಿತಿಯಿರುವದಿಲ್ಲ. ಅವುಗಳಲ್ಲಿ ಚಿರಸ್ಥಾಯಿಯಾದುದನ್ನೆ ಎತ್ತಿ ತೋರಿಸಬೇಕೆಂದು ನಾನು ಸಂಕಲ್ಪಿಸಿರುವೆ. ವಿಶ್ವವಿದ್ಯಾಲಯವನ್ನು ಶುದ್ಧಗೊಳಿಸಲು ಸಹಾಯ ಮಾಡಬಯಸುವವರೆಲ್ಲ ಮಾಳವೀಯಜಿ ಮಹಾರಾಜರ ಅಂತರ್ಜೀವನದ ಮನನಮಾಡಿ ಅದನ್ನನುಸರಿಸುವಪ್ರಯತ್ನವನ್ನು ಮಾಡಬೇಕು.

ಮೋ. ಕ. ಗಾಂಧಿ

ಶ್ರೀರಾಮಪುರ ೨೩—೧೧—೪೬



# ಒಬ್ಬ ನಿಗ್ರೋ ಸಾಧು

[ಕಳೆದ ಒಂದುನೂರು ವರ್ಷಗಳಲ್ಲಿ ವಿಜ್ಞಾನದಲ್ಲಾದ ಬೆಳವಣಿಗೆಯಿಂದ ನಮ್ಮೀ ಜಗತ್ತಿನ ಇರವಿನಲ್ಲಿ ಪ್ರಚಂಡ ಪ್ರಗತಿಯಾಗಿದೆಯೆಂದು ಪ್ರತಿಪಾದಿಸುವದುಂಟು. ಆದರೆ ಆ ಪ್ರಗತಿಯಿಂದ ದೊರಕಿದ ಶ್ರೇಯಸ್ಸು ಮಾತ್ರ ಅನುಮಾನಾಸ್ಪದವಾಗಿದೆಯೆಂದು ಎಲ್ಲರೂ ಇಂದು ಒಪ್ಪುತ್ತಾರೆ. ಒಂದು ರೀತಿಯಲ್ಲಿ ಅದಿಂದು ಗರ್ಹಣೀಯವಾಗಿ ಕುಳಿತಿದೆ. ಏಕೆಂದರೆ ಮಾನವನ ದುಃಖ ಕ್ಲೇಶಗಳನ್ನು ದೂರ ಮಾಡಲು ಸಹಾಯಕವಾಗುವದಕ್ಕಿಂತಲೂ ಅದು ಆಕ್ರಮಣ, ಶೋಷಣೆ, ವಿನಾಶಗಳಿಗೆ ಅನುಕೂಲ ಮಾಡಿಕೊಟ್ಟದ್ದೇ ಹೆಚ್ಚು ತನ್ನ ಉಚ್ಛ್ರಾಯದೊಡನೆ ಅದು ವಿವಿಧ ರೂಪದ ಸ್ಥಲಜಲಾಕಾಶವ್ಯಾಪಿ ಹಿಂಸೆಗಳನ್ನು ಕಟ್ಟಿಕೊಂಡು ಬಂದಿದೆ. ಪರಿಣಾಮವಾಗಿ ಒದಗಿದ ಭೀಕರ ಯುದ್ಧಗಳ ಉಂಪಟಳಕ್ಕೆ ಸಿಲುಕಿ ಮಾನವ ಜಾತಿಯಿಂದು ಸೋತ-ಕಂಗೆಟ್ಟು ಭೂಶಾಯಿಯಾಗಿದೆ.

ಪಾಶ್ಚಾತ್ಯ ಜಗತ್ತಿನ ಪ್ರಸಿದ್ಧ ವೈಜ್ಞಾನಿಕರ ಶ್ರೇಣಿಯಲ್ಲಿ ಮಾನವ ಜಾತಿಯ ನಿಜವಾದ ಸೌಖ್ಯಕ್ಕಾಗಿ ಆಯುಷ್ಯವನ್ನು ಧಾರೆಯೆರೆದ ಹೆಸರುಗಳು ಅಪವಾದಸ್ವರೂಪವಾಗಿ ಕೆಲವು ಮಾತ್ರ ಕೈದೀವಿಗೆಗಳಂತೆ ಪ್ರಕಾಶಿಸುತ್ತಿವೆ. ಅಂಥ ಒಬ್ಬ ಸಾಧು ಅಮೇರಿಕೆಯ ದಕ್ಷಿಣ ಭಾಗದಲ್ಲಿ, ಜನರ ತಿರಸ್ಕೃತ ನಿಗ್ರೋಗಳ ನಡುವೆ ಹುಟ್ಟಿ ಕೀರ್ತಿಶಿಖರಕ್ಕೇರಿದನು. ಅತಿ ದರಿದ್ರ ಒಕ್ಕಲತನ ಕೂಲಿಕಾರರಿಗೆ ಕೂಡ ಹೆಚ್ಚು ಆಹಾರ ಮತ್ತು ಸುಖದ ರೂಪದಲ್ಲಿ ಮೂಲಭೂತ ಅವಶ್ಯಕತೆಗಳು ಸಮೃದ್ಧವಾಗಿ ದೊರಕುವಂತಾಗಲೆಂದು ಅವನು ಜೀವನವನ್ನೆ ಅಮೇರಿಕದ ಒಕ್ಕಲತನದ ಸುಧಾರಣೆಗಾಗಿ ಮೀಸಲಿಟ್ಟನು ಈ ಕೆಳಗಿನ ವಿವರಗಳನ್ನು ನಮ್ಮ ವಿಧಾಯಕ ಕಾರ್ಯಕರ್ತರ ಅವಗಾಹನೆಗಾಗಿ "ಅಮೇರಿಕನ್ ಪಿಕ್ಟೋರಿಯಲ್" ("ವಿಶ್ವಾರಿ" ಪತ್ರಿಕೆಯ ೧೯೪೪ರ ವಿಶೇಷ ಹಿಂದೀ ಸಂಚಿಕೆ) ನಿಂದ ಎತ್ತಿ ಕೊಡಲಾಗಿದೆ. ]

—ಎಸ್. ಎ

ಜಾರ್ಜ ವಾಶಿಂಗಟನ್ ಕಾರ್ವರನು ತನ್ನ ದೀರ್ಘ ಜೀವಮಾನದಲ್ಲಿ ಸಾಧಿಸಿದ ನಿಸ್ವಾರ್ಥ ಕಾರ್ಯಗಳಿಂದ, ತನ್ನ ಬುದ್ಧಿಯ ಪ್ರತಿಭಾಶಕ್ತಿಯನ್ನಿಷ್ಟೇ ಅಲ್ಲ, ಸ್ವತಂತ್ರ ದೇಶದಲ್ಲಿ ಮನುಷ್ಯನ ವಿಕಾಸಕ್ಕಿರುವ ಅಸ್ಪದವನ್ನೂ ಜಗತ್ತಿಗೆ ತೋರಿಸಿಕೊಟ್ಟ ಅಮೇರಿಕನ್ನನು. ನಿರ್ಗತಿಕತೆಯಿಂದ ಪ್ರಾರಂಭವಾದ ಅವನ ಬಾಳುವೆ ಉನ್ನತಿ ಹೊಂದಿ ಆಧುನಿಕ ಜಗತ್ತಿನ ಅತ್ಯಂತ ಶ್ರೇಷ್ಠ ಕೃಷಿ ವಿಜ್ಞಾನಿಗಳಲ್ಲೊಬ್ಬನೆಂಬ ಹೆಸರಿಗೆ ಪಾತ್ರನಾಯಿತು. ಒಂದರ್ಥ ರಾಷ್ಟ್ರದ ಕೃಷಿಕರ್ಮದ ಆರ್ಥಿಕ ರೂಪವನ್ನೆ ಪಲ್ಲಟಗೊಳಿಸದ್ದಲ್ಲದೆ, ಕೃಷಿಕ ರಸಾಯನ ಶಾಸ್ತ್ರದಲ್ಲಿ ತಾನು ಮಾಡಿದ ನೂರಾರು ಶೋಧಗಳಿಂದಲೂ ಸಾಧಿಸಿದ ಮಹಾಕಾರ್ಯಗಳಿಂದಲೂ ಜಗತ್ತನ್ನು ಋಣಿಯಾಗಿ ಮಾಡಿಕೊಂಡನು.

ಕಾರ್ವರನು ೧೮೬೪ ರಲ್ಲಿ ಮಿಸೋರಿ (ದಕ್ಷಿಣ ಸಂಯುಕ್ತ ಸಂಸ್ಥಾನ, ಅಮೇರಿಕಾ) ಯಲ್ಲಿ ಡಾಯಮಂಡ ಗೋವಿನ ಸಮೀಪ ಹುಟ್ಟಿದನು. ಅವನ ಹೆತ್ತವರು ನಿಗ್ರೋ ಗುಲಾಮರು; ಆದರೆ ಕಾರ್ವರನಿಗೆ ಅವರ ಪರಿಚಯವೇ ಇದ್ದಿಲ್ಲ. ಅವನು ಮಗುವಾಗಿದ್ದಾಗಲೆ ಅವನನ್ನೂ ಅವನ ತಾಯಿಯನ್ನೂ (ತಂದೆ ಮೊದಲೇ ತೀರಿಕೊಂಡಿದ್ದ) ದರೋಡೆಗಾರರು ಅಪಹರಿಸಿಕೊಂಡು ಹೋದರು. ಮಗುವನ್ನು ಒಂದು ಜರಠ ಓಟದ ಕುದುರೆಗೆ ವಿನಿಮಯ ಮಾಡಿ ಮಾರಲಾಯಿತು. ಅವನ ತಾಯಿಯ ಸುದ್ದಿ ಕೊನೆಗೂ ಹತ್ತಲಿಲ್ಲ. ೧೮೬೫ ರಲ್ಲಿ ಘಟನೆಯನ್ನು ತಿದ್ದಿ ಗುಲಾಮಗಿರಿಯನ್ನು ರದ್ದುಗೊಳಿಸಲಾಯಿತು. ಆಗ ಮೋಶೆಸ ಕಾರ್ವರನೆಂಬ ಬಿಳಿ ತೋಟಗಾರ ಅವನನ್ನು ತನ್ನ ಮನೆತನದಲ್ಲಿ ತೆಗೆದುಕೊಂಡು, ತನ್ನ ಮನೆ ಹೆಸರನ್ನೆ ಕೊಟ್ಟು ಮನೆ ಚಾಕರಿಗಾಗಿ ಸಾಕಿದನು.

ವಿದ್ಯಾಪಿಪಾಸೆಯಿಂದ ಆ ಹುಡುಗನು ತನ್ನ ದಾರಿ ತಾನು ಹಿಡಿದ. ಮೊಟ್ಟಮೊದಲು ಅವನು ಹೊಲದಿಂದ ಹೊಲಕ್ಕೆ ಕೆಲಸ ಹುಡುಕುತ್ತ ಅಲೆದು ಕಣಜಗಳಲ್ಲೊ ಬಣವಿಗಳಲ್ಲೊ ನಿದ್ದೆ ಮಾಡಿ ಕಾಲ ಹಾಕಿದ. ಬೇಗನೆ ಅವನನ್ನು ಕಾರುಣಿಕಳಾದ ಮರಿಯಾ ವಾಟಕಿನ್ಸ ಎಂಬವಳು ಕೆಲಸಕ್ಕೆ ತೆಗೆದುಕೊಂಡಳು. ಅವಳು ಹೇಳಿದ ಕೆಲಸ ಮಾಡಿ ಅವನು ಸಂಗಡಲೇ ಹಳ್ಳಿಯ ಶಾಲೆಗೆ ಹೋಗತೊಡಗಿದ. ಆ ಮೇಲೆ ಹಾಯಸ್ಕೂಲು ಸೇರಿದ. ಆಗ ಅವನ ಉದರಪೋಷಣೆ ಮುಖ್ಯವಾಗಿ ಬಟ್ಟೆ ಒಗೆಯುವದರಿಂದ ಸಾಗುತಿತ್ತು. ಅಷ್ಟರಲ್ಲಿ ಇಪ್ಪತ್ತರ ವಯಸ್ಸು ಮೀರಿದ ಕಾರ್ವರನು ಆಯೋವಾ ಪ್ರಾಂತಕ್ಕೆ ಹೋಗಿ, ಅಲ್ಲೊಂದು ಚಿಕ್ಕ ಲಾಂಡ್ರಿ ತೆಗೆದು ಕಾಲೇಜು ಸೇರಲು ಸಾಲುವಷ್ಟು ಹಣ ಗಳಿಸಿಕೊಂಡ. ಮೂರು ವರ್ಷ ಕಾಲ ಸಿಂಪ್ಸನ ಕಾಲೇಜಿನಲ್ಲಿದ್ದಾಗ ಅವನು ಕೀಳು ಚಾಕರಿ ಮಾಡಿ ಜೀವಿಕೆಯನ್ನು ಗಳಿಸಬೇಕಾಯಿತು. ಮುಂದೆ ಏಮ್ಸದಲ್ಲಿರುವ ಆಯೋವಾ ಸ್ಟೇಟ ಕಾಲೇಜಿನಲ್ಲಿ ನಾಲ್ಕು ವರ್ಷದ ಕೃಷಿ ಶಾಸ್ತ್ರಾಭ್ಯಾಸ ಪೂರೈಸಲು ಹೋದನು. ಅಲ್ಲಿ ಅವನಿಗಿದ್ದ ನೆಲ ಮತ್ತು ಸಸ್ಯಗಳ ವಿಶೇಷ ಪರಿಜ್ಞಾನದ ಫಲವಾಗಿ ಅವನಿಗೆ ಅಚಾರ್ಯಗಣದಲ್ಲಿ ಸ್ಥಾನ ದೊರೆಯಿತು.

೧೮೯೬ ರಲ್ಲಿ ಜಾರ್ಜ ವಾಶಿಂಗಟನ ಕಾರ್ವರನು ಅಲ್ಬಾಮಾ ಸಂಸ್ಥಾನದ ಟಸ್ಕೆಜೀ ಎಂಬಲ್ಲಿಗೆ ಅಲ್ಲಿ ಹೊಸತಾಗಿ ಸ್ಥಾಪಿತವಾಗಿದ್ದ ಟಸ್ಕೆಜೀ ಸಂಸ್ಥೆಯಲ್ಲಿ ಒಂದು ಕೃಷಿಪ್ರಯೋಗ ಶಾಲೆಯನ್ನು ತೆರೆಯಲು ಹೋದನು. ಈ ಪ್ರಯೋಗಶಾಲೆಯ ಹಾಗು ಅದಕ್ಕೆ ಹೊಂದಿಕೊಂಡ ೧೯—ಎಕರೆಯ ಪ್ರಾಯೋಗಿಕ ಕೃಷಿಕ್ಷೇತ್ರದ ನಿರ್ಮಾಣವೆಂಬುದು ಕಾರ್ವರನ ನೈಪುಣ್ಯ, ಸಂಕಲ್ಪಶಕ್ತಿಗಳಿಗೆ ಎಂದೂ ಮಾಸದ ಕಳಸದಂತಿದೆ. ಟಸ್ಕೆಜಿಯಲ್ಲಿ ಅವನಿಗೆದುರಾದುದು ಒಂದು ಶೂನ್ಯ ಕಟ್ಟಡ. ಅದಕ್ಕೆ ಬೇಕಾದ ಸಾಧನ ಸಾಮುಗ್ರಿಗಳಿಗೆ ರೊಕ್ಕವಿದ್ದಿಲ್ಲ. ಅವನ ಪ್ರಾಯೋಗಿಕ ಕೃಷಿ ಕ್ಷೇತ್ರವೆಂಬುದು ನಿಸ್ಸಾರ ಮಳಲು ತುಂಬಿದ ಬರಿ ನೆಲದ ತುಂಡಾಗಿತ್ತು. ಕಾರ್ವರನು ತನ್ನ ವಿದ್ಯಾರ್ಥಿಗಳನ್ನು ಬಕೀಟು, ಪಾತ್ರೆಗಳನ್ನು ಕೊಟ್ಟು ಅಡವಿಗಟ್ಟುತಿದ್ದನು. ದಿನದಿನವೂ ಅವರು ಕೆಸರು ತರಗೆಲೆಗಳನ್ನು ಹೊತ್ತು ತರುತಿದ್ದರು. ಅದು ಆ ಪ್ರಯೋಗ ಕ್ಷೇತ್ರದ ಮೇಲ್ಮೆಲವಾಯಿತು. ಉಪ್ಪಕ್ಕಾಗಿ ಕಾರ್ವರನು ದೊಡ್ಡ ಒಲೆಯನ್ನು ಕಟ್ಟಿದನು. ಕೈಗೆ ಸಿಕ್ಕಿದ ವಸ್ತುಗಳಿಂದ —ಅಡಿಗೆಮನೆಯ ಕಪ್ಪುಗಳು, ಹಳೆಯ ಬಾಟಲಿಗಳು, ಮಸಿದೌತಿಗಳು ಮತ್ತು ಹೊಲಸ ರಾಶಿಯಿಂದಾರಿಸಿದ ಕಬ್ಬಿಣದ, ಮುರದ ತುಣುಕುಗಳಿಂದ ಪ್ರಯೋಗಶಾಲೆಯ ಸಾಧನ ಸಾಮುಗ್ರಿಗಳನ್ನು ಮಾಡಿಕೊಂಡನು.

ಕಾರ್ವರನು ಆವೆ ಮಣ್ಣು ತುಂಬಿದ ಅಲ್ಬಾಮಾದ ಭೂಮಿಯ ಮೇಲೆ ತನ್ನ ಪ್ರಯೋಗಗಳನ್ನು ಪ್ರಾರಂಭಿಸಿದನು. ಎಕರೆಗೆ ಹೆಚ್ಚು ಹತ್ತಿ ಹುಟ್ಟಬೇಕಾದರೆ ಆ ಭೂಮಿಯನ್ನು ಹೇಗೆ ಅಣಿಗೊಳಿಸಬೇಕೆಂದು ಅವನು ಒಕ್ಕಲಿಗರಿಗೆ ತೋರಿಸಿ ಕೊಟ್ಟನು. ಶಾಲೆಯ ಭೂಮಿಯಲ್ಲಿ ಕಾರ್ವರನು ಎಕರೆಗೊಂದು ಗಂಟಿನ ಲೆಕ್ಕದಲ್ಲಿ ಹತ್ತಿ ಹುಟ್ಟಿಸಿದನು. ಹೆಚ್ಚು ಹತ್ತಿ ಹುಟ್ಟಿಸಿದ ಅಲ್ಬಾಮಾದ ಪ್ರಥಮ ಬೆಳೆಗಳಲ್ಲಿ ಅವನದು ಒಂದಾಗಿತ್ತು. ದಕ್ಷಿಣದ ಆರ್ಥಿಕ ಪುನರುಜ್ಜೀವನಕ್ಕೆ ಅವನು ಮಾಡಿದ ಇನ್ನೊಂದು ಸೇವೆಯೆಂದರೆ ಹೊಸ ಅನುಕೂಲ ಬೆಳೆಗಳನ್ನು ಪ್ರಾರಂಭಿಸಿದ್ದು. ವರ್ಷಕ್ಕೊಂದರ ಬದಲು ಎರಡು ಗೆಣಸಿನ ಬೆಳೆಗಳನ್ನು ಹೇಗೆ ತೆಗೆಯಬೇಕೆಂದು ಅವನು ದಕ್ಷಿಣದ ಕೃಷಿಕರಿಗೆ ಹೇಳಿಕೊಟ್ಟನು. "ಭೂಮಿ ಬರಡೆಂದು ಎಲ್ಲರೂ ನನಗೆ ಹೇಳಿದರು," ಎಂದು ಅವನು ಅಪರಾಯುಷ್ಯದಲ್ಲಿ ಹೇಳುತಿದ್ದನು. "ಆದರೆ ನನಗೆ ದೊರೆತದ್ದು ಅದೊಂದೇ ಭೂಮಿ. ಅದು ಬರಡಾಗಿದ್ದಿಲ್ಲ. ಅದನ್ನು ಉಪಯೋಗಿಸಿದ್ದಿಲ್ಲ, ಇಷ್ಟೆ." ಇಂದು ಹತ್ತಿ ತಂಬಾಕುಗಳಲ್ಲದೆ, ಗೆಣಸು ಮತ್ತು ವಟಾಣಿಕಾಯಿ ಬೆಳೆಗಳೂ (pea-nut) ಅಮೇರಿಕೆಯ ದಕ್ಷಿಣ ಭಾಗದ ಪ್ರಮುಖ ಪೈರುಗಳಾಗಿವೆ.

ಮುಂದೆ ಕಾರ್ವರನು ಈ ಸಸ್ಯಗಳ ಉಪಯುಕ್ತತೆ ಅಮಿತವಾಗಿದೆಯೆಂದು ತೋರಿಸಿಕೊಟ್ಟನು. ಗೆಣಸನ್ನು ತನ್ನ ಪ್ರಯೋಗ ಶಾಲೆಗೊಯ್ದು ಪಿಷ್ಟ (ಸ್ಟಾರ್ಚ), ಹುಳಿಹಿಂಡ, ಮೀನಸರಿಸು, ಬೆಲ್ಲ, ರಗ್ಗು, ಮತ್ತು ಗೊಬ್ಬರ ಮೊದಲಾದ ನೂರಾರು ಉಪಯುಕ್ತ ಪದಾರ್ಥಗಳನ್ನು ಉತ್ಪಾದಿಸಿದನು. ವಟಾಣಿ ಜಾತಿಯ ಕಾಳು ಬಹುಕಾಲದಿಂದ ಏತಕ್ಕೂ ಬಾರದ್ದೆಂದು ಪ್ರಸಿದ್ಧವಾಗಿತ್ತು. ಆದರಿಂದ ಕಾರ್ವರನು ಕಾಫಿ, ಹಾಲು, ಮುದ್ರಣದ ಮಸಿ, ಹಿಟ್ಟು, ಔಷಧತೈಲ, ಕಾಗದ ಮತ್ತು ಯಂತ್ರದ ಚರಬಿ ಮೊದಲಾದ ೩೦೦ ಪದಾರ್ಥಗಳನ್ನು ಹುಟ್ಟಿಸಿದನು.

ಯಾವಾಗಲೂ ತನ್ನ ಸುತ್ತಮುತ್ತಲ ಪ್ರಕೃತಿ ಸಂಪತ್ತಿಯನ್ನೆ ಉಪಯೋಗಿಸಿಕೊಂಡು ಕೆಲಸ ಮಾಡುತಿದ್ದ ಕಾರ್ವರನು ದಕ್ಷಿಣದಲ್ಲಿ ವಿಫುಲವಾಗಿರುವ ಒಂದು ಬಗೆಯ ದೇವದಾರು ಮರದ ಮೇಲೆ ಪ್ರಯೋಗ ನಡೆಸತೊಡಗಿದನು. ಅವನು ಅದನ್ನು ಕಾಗದವಾಗಿ ಮಾರ್ಪಡಿಸಿದನು. ಈ ಶೋಧದಿಂದಾಗಿ ಇಂದು ದಕ್ಷಿಣ ಸಂಸ್ಥಾನಗಳಲ್ಲಿ ದೊಡ್ಡ ಉದ್ಯೋಗಗಳು ಬೆಳೆದು ಬರುವಂತಾಗಿದೆ. ನೆರೆಹೊರೆಯವರಿಂದ "ಅಮೃತ ಹಸ್ತ" ದವನೆಂದು ಕರೆಸಿಕೊಳ್ಳುತಿದ್ದ ಈ ಕರುಣಾಳು, ವಿನೀತ, ಸಹನಶೀಲ ವಿಜ್ಞಾನಿಗೆ ಕೆಲಸಕ್ಕೆ ಬಾರದ ವಸ್ತುವೆಂಬುದೇ ಇದ್ದಿಲ್ಲ. ಕಟ್ಟಿಗೆ ಪುಡಿಗೆ ಅವನೊಂದು ಉಪಯೋಗವನ್ನು ಕಂಡು ಹಿಡಿದ—ಅದೆಂದರೆ ಕೃತಕ ಅಮೃತಶಿಲೆ. ಜೋಳದ ದಂಟು, ಗರಗಸಪುಡಿ, ಹತ್ತಿಯ ಕಟ್ಟಿಗೆಗಳು ವಿದ್ಯುತ್ ನಿರೋಧಿ (insulating) ಹಲಗೆಗಳನ್ನಾಗಿಯೂ ನೆಲಕ್ಕೆ ಹಾಸುವ ಇಟ್ಟಿಗೆಗಳಾಗಿಯೂ ಮಾರ್ಪಡಿಸಲ್ಪಟ್ಟವು. ಹೊಲದ ಹೂಗಳ ಕಡೆ ತಿರುಗಿ, ವಿಸ್ಟಾರಿಯಾ, ಸೂರ್ಯಪಾನ, ಕಾಡು ಹಿಬಿಸ್ಕಸ್‌ಹೂವು ಬೆಂಡುಗಳಿಂದ ಕಾಗದ ಮಾಡಿ ತೋರಿಸಿದನವನು.

ಮನುಷ್ಯನು ತನ್ನ ಸುತ್ತಮುತ್ತ ನೂರು ಗಜದಷ್ಟು ಕ್ಷೇತ್ರದಲ್ಲಿ ಬೆಳೆಯುವ ವಸ್ತುಗಳಿಂದಲೇ ತನ್ನ ಜೀವಮಾನವೆಲ್ಲ ಬದುಕಬಹುದೆಂದು ಕಾರ್ವರನ ನಂಬಿಕೆಯಾಗಿತ್ತು. ಈ ಸಿದ್ಧಾಂತವನ್ನು ಪ್ರಯೋಗಿಸಿ ತೋರಿಸುವದಕ್ಕಾಗಿ ಅವನು ಸುತ್ತು ಮುತ್ತಲ ಕಳೆ, ಪುಷ್ಪ, ಕಾಡು ಹಣ್ಣುಗಳು, ಮನೆ ಬಾಗಿಲ್ಲಲ್ಲಿ ಬೆಳೆಯುವ ಪೊದರುಗಳು, ಮೊದಲಾದವನ್ನು ಸಂಗ್ರಹಿಸಿ ಅವುಗಳಲ್ಲಿ ಅಧಿಕಾಂಶವನ್ನು ಸಾರು, ಗಿಣ್ಣ, ಪಲ್ಲೆ ಮೊದಲಾದ ಅನೇಕ ಖಾದ್ಯ, ಪುಷ್ಟಿಕರ ವಸ್ತುಗಳನ್ನಾಗಿ ಮಾಡಿದನು. ಕಾರ್ವರನು ತನ್ನ ಈ ತಿಂಡಿ ತಿನಸುಗಳ ಪದ್ಧತಿಯನ್ನು ಬರೆದು ಪುಸ್ತಕಗಳನ್ನು ಮಾಡಿ ಪುಕ್ಕಟೆಯಾಗಿ ರಾಜ್ಯದಲ್ಲೆಲ್ಲ ಹಂಚುತಿದ್ದನು.

ತನ್ನ ಶ್ರಮದ ಫಲವನ್ನು ಒಕ್ಕಲಿಗನು ಧರ್ಮಾರ್ಥವಾಗಿ ಅನುಭೋಗಿಸಬೇಕೆಂಬ ಆಶೆಯಿಂದ ಅವನು ಒಂದು ಹಳೆ ಬಗಿಯನ್ನು ಸಂಚಾರಿ ಕೃಷಿಪಾಠಶಾಲೆಯಾಗಿ ಮಾಡಿ ತನ್ನ ಸಿದ್ಧಿಗಳನ್ನೂ ರೀತಿಗಳನ್ನೂ ಪ್ರಚಾರ ಮಾಡಿದನು. ಆ ವಾಹನದಲ್ಲಿ ತನ್ನ ಪ್ರದರ್ಶನ ವಸ್ತುಗಳನ್ನು ಹೇರಿ ಯಾರಿಂದಾದರೂ ಒಂದು ಕುದುರೆಯನ್ನು ಎರವು ತೆಗೆದುಕೊಂಡು ಅಲ್ಬಾಮಾದ ಹಳ್ಳಿಗಾಡುಗಳಲ್ಲಿ ಸಂಚಾರ ಮಾಡುತಿದ್ದನು. ಮತ್ತು ಹಳ್ಳಿಯ ಒಕ್ಕಲಿಗರಿಗೆ ಹೊಲಗಳಲ್ಲಿಯೋ ಕಣಜ ಕೋಣೆಗಳಲ್ಲಿಯೋ ಭಾಷಣ ಮಾಡಿ ತನ್ನ ಶೋಧಗಳನ್ನು ಅವರಿಗೆ ದಾನ ಮಾಡುತಿದ್ದನು. ಇಂದು ಸರಕಾರದ ಕೃಷಿಶಾಖೆಯವರ ಆಶ್ರಯದಲ್ಲಿ ದಕ್ಷಿಣ ಭಾಗದಲ್ಲೆಲ್ಲ ಸಂಚರಿಸಿ ಪ್ರಚಾರ ಮಾಡುವ ಮೋಟಾರ ಟ್ರಕ್ಕಿನ "ಸಂಚಾರಿಶಾಲೆ"ಗಳಿಗೆ ಕಾರ್ವರನ ಕುದುರೆ ಗಾಡಿಯ ಸಂಚಾರಿ ಶಾಲೆಯೇ ಮುತ್ತಜ್ಜ.

ಕಾರ್ವರನಿಗೊಂದೇ ಒಂದು ವ್ಯಸನವಿತ್ತು. —ಅದೂ ವ್ಯಸನವೆಂದು ಕರೆಸಿಕೊಳ್ಳಬಹುದೇ ಎಂಬುದು ಸಂಶಯ. ಅದೆಂದರೆ ಕಲೆ. ಸೃಷ್ಟಿ ಸೌಂದರ್ಯದ ದೃಶ್ಯಗಳೇ ಮೊದಲಾದವುಗಳಲ್ಲಿ ಅವನು ಸಾಕಷ್ಟು ಪ್ರಶಸ್ತಿಗಳಿಸಿದ್ದ. ಅವನ ಅತಿಸುಂದರ ಚಿತ್ರಗಳಲ್ಲೊಂದಾದ ಯುಕಾಗಿಡ ಟಸ್ಕೇಜೀ ಸಂಸ್ಥೆಯ ಚಿತ್ರಶಾಲೆಯಲ್ಲಿ ತೂಗಾಡುತಿದೆ. ಈ ಲಲಿತಕಲಾ ಪ್ರೀತಿ ಕೂಡ ಅವನ ವೈಜ್ಞಾನಿಕ ವಾಸನೆ, ಉಪಯೋಗವಾದಗಳಿಂದ ದೂರವಾಗಿದ್ದಿಲ್ಲ. ಅವನಿದ್ದ ಮೇಕನ್ ಕೌಂಟಿಯ ಆವೆ ಮಣ್ಣಿನಿಂದಲೇ ಅವನು ತನ್ನ ಚಿತ್ರಗಳಿಗೆ ಬಣ್ಣಗಳನ್ನು ಮಾಡಿಕೊಳ್ಳುತಿದ್ದ. ತಮ್ಮ ಮನೆ ಕಣಜಗಳನ್ನು ಸಿಂಗರಿಸಲು ತಮ್ಮ ಸ್ವಂತ ಭೂಮಿಯಿಂದಲೇ ಹೇಗೆ ಒಳ್ಳೆ ಬಣ್ಣಗಳನ್ನು ಪಡೆಯಬಹುದೆಂದು ಕೃಷಿಕರಿಗೆ ತೋರಿಸಿದವನು. ಈ ಅಲ್ಬಾಮಾ ಆವೆ ಮಣ್ಣಿನಿಂದ ಅವನು ಫೇಸ ಪೌಡರ, ಮಣ್ಣಿನ ಪಾತ್ರೆಗಳು, ಅರಿವೆಯ ರಗುಗಳು ಇವುಗಳನ್ನು ಮಾಡಿದನು. ಹತ್ತಿಯನ್ನು ಅರೆಯುವಾಗ ಹೊರಬೀಳುವ ಆರಳೆ ಬಹಳ ಪ್ರಯೋಜನಕಾರಿಯೆಂದು ಕಾರ್ವರನು ತೋರಿಸಿದನು; ಅವನು ಅದನ್ನು ನೆಲಕ್ಕೆ ಹಾಕುವ ಫರಸುಗಳನ್ನಾಗಿಯೂ ರಗ್ಗುಗಳನ್ನಾಗಿಯೂ ಮಾಡಿದನು.

ವಿದ್ಯುದ್ದೀಪ, ಪ್ರಾರಂಭಿಕ ಚಲಚ್ಚಿತ್ರ, ಗ್ರಾಮಾಫೋನುಗಳ ಅವಿಷ್ಕರ್ತನಾದ ಅಮೇರಿಕನ್‌ವಿಜ್ಞಾನಿ ಥಾಮಸ್ ಎಡಿಸನ್ನನು ಕಾರ್ವರನಿಗೆ ತನ್ನ ಪ್ರಯೋಗಶಾಲೆಯಲ್ಲಿ ಒಂದು ಸ್ಥಳವನ್ನು ಕೊಡಮಾಡಿದನು. ಆದರೆ ಕಾರ್ವರನು ಅದನ್ನು ನಿರಾಕರಿಸಿದನು. ತನ್ನ ಜೀವನ ಕರ್ಮ ಅಲ್ಬಾಮಾದಲ್ಲಿಯೆ ಇದೆಯೆಂಬುದು ಅವನ ನಂಬಿಕೆಯಾಗಿತ್ತು. ಹಣದ ಮೇಲೆ ಅವನಿಗೆ ಎಳ್ಳಷ್ಟು ಆಶೆಯಿದ್ದಿಲ್ಲ. ತನ್ನ ವಿಶೇಷ ಸಲಹೆ ಸೇವೆಗಳನ್ನು ಪ್ರತಿಫಲದ ವಿಚಾರವನ್ನೆ ಮನಸಿನಲ್ಲಿ ಕೂಡ ಎತ್ತದೆ ಕೊಡುತಿದ್ದನು. ಅವನ ಸಂಬಳದ ಚಕ್ಕುಗಳು ಕೋಶಾಧ್ಯಕ್ಷನ ಕಾರ್ಯಾಲಯದಲ್ಲಿ ವರ್ಷಗಟ್ಟಲೆ ರಾಶಿ ಬಿದ್ದಿದ್ದವು. ಸಾಯಲು ಕೆಲ ದಿನಗಳ ಮೊದಲಿನ ವರೆಗೂ ಅವನು ಅದನ್ನು ಉಪಯೋಗಿಸಿಕೊಳ್ಳಲಿಲ್ಲ.

ವಟಾಣಿಕಾಯಿಯಿಂದ ರೋಗ ನಿವಾರಕಶಕ್ತಿಯುಳ್ಳ ಒಂದು ಎಣ್ಣೆಯನ್ನು ಕಾರ್ವರನು ನಿರ್ಮಿಸಿದಾಗ ಅದನ್ನವನು ಪೇಟೆಂಟ ಹಕ್ಕು ಕಾಯ್ದುಕೊಳ್ಳದೆ ಸುಮ್ಮನೆ ವೈದ್ಯ ಜಗತ್ತಿನ ಉಪಯೋಗಕ್ಕೆ ಬಿಟ್ಟುಕೊಟ್ಟನು. ಪೆಕನ್ ಗಿಡಕ್ಕೆ ಬಡಿದ ಒಂದು ದುರ್ನಿವಾರ ರೋಗವನ್ನು ನಿವಾರಿಸುವ ಉಪಾಯವನ್ನು ಹೇಳಿಕೊಟ್ಟು ಅದನ್ನು ಬೆಳೆಯುವವರಿಗೆ ಉಪಕಾರ ಮಾಡಿದಾಗ ಅವರು ಅವನಿಗೆ ಪ್ರತಿಫಲ ಕೊಟ್ಟರೆ ಅದನ್ನು ತಿರುಗಿ ಕೊಟ್ಟುಬಿಟ್ಟನು. ಬಟಾಟಕಾಯಿಯ ಸಿಪ್ಪೆಯಿಂದ ಕೃತಕ ಅಮೃತ ಶಿಲೆಯನ್ನು ಮಾಡುವ ಸೂತ್ರವನ್ನು ಅವನೊಮ್ಮೆ ನೆರೆಸಂಸ್ಥಾನವಾದ ಮಿಸಿಸಿಪಿಯ ಒಂದು ಕಾರಖಾನೆಗೆ ದಾನಮಾಡಿದನು. ಅದರ ನಿರ್ಮಾಣದಲ್ಲಿ ಕಾರಖಾನೆಗೆ ಕೆಲ ತೊಡಕುಗಳು ಎದುರಾದಾಗ ಅವನನ್ನು ತಮ್ಮ ಕಾರಖಾನೆಯಲ್ಲಿ ಸೇರಿಸಿಕೊಳ್ಳಲು ಸಂಚಾಲಕರು ಪ್ರಯತ್ನಿಸಿದರು. ಅವನೊಪ್ಪದ್ದರಿಂದ ಆ ಕಂಪನಿಯೇ ಟಸ್ಕೆಜೀಗೆಬಂದು ಅವನ ಸಲಹೆ—ಮಾರ್ಗದರ್ಶನಗಳನ್ನು ಪುಕ್ಕಟೆಯಾಗಿ ಪಡೆಯಬೇಕಾಯಿತು.

೧೯೪೧ ರಲ್ಲಿ ಕಾರ್ವರನಿಗೆ ವೈಜ್ಞಾನಿಕ ಸಂಶೋಧನೆಯಲ್ಲಿ ಶ್ರೇಷ್ಠ ಸಾಧನೆಗಳನ್ನು ಮಾಡಿದ ಬಗ್ಗೆ ರೂಜವೆಲ್ಟ ಪದಕ ಕೊಡಲ್ಪಟ್ಟಿತು. ಮರು ವರ್ಷ ಈ ನರೆಗೂದಲ, ಮಿತಭಾಷಿ, ಉದಾರ, ಎರವತ್ತು ವಯಸ್ಸಿನ ಮುದುಕ ವೈಜ್ಞಾನಿಕನು ಜಾರ್ಜ ವಾಶಿಂಗಟನ್ ಕಾರ್ವರ್ ಪ್ರತಿಷ್ಠಾನವನ್ನು ಉಳಿತಾಯದಿಂದ ತನ್ನ ಜೀವಮಾನದ ಕೃಷಿ ರಸಾಯನ ಶಾಸ್ತ್ರದಲ್ಲಿ ಸಂಶೋಧನೆಗಳನ್ನು ಮುಂದುವರಿಸುವಗೋಸುಗ ಸ್ಥಾಪಿಸಿದನು ಮೂರು ವರ್ಷಗಳ ನಂತರ ಅವನು ತೀರಿಕೊಂಡನು.

ಜಾರ್ಜ ವಾಶಿಂಗಟನ್ ಕಾರ್ವರನ ಹೆಸರು ಬರಿ ವೈಜ್ಞಾನಿಕ ಸಾಧನೆ ಮತ್ತು ಮಾನವ ಪ್ರತಿಭೆಯ ಸಂಕೇತವಾಗಿಲ್ಲ; ಸ್ವಾತಂತ್ರ್ಯದ ಅರ್ಥವನ್ನು ಅವಲೋಕಿಸುವವರಿಗೆ, ತಮ್ಮದೇ ಹಾದಿ ಹಿಡಿದು, ಸ್ವತಂತ್ರವಾಗಿ, ಗೌರವದಿಂದಲೂ ಆಶಾಸುಖದಿಂದಲೂ ಮುನ್ನಡೆಯಲು ಆತುರ ಪಡುವವರಿಗೆಲ್ಲ ಮಹತ್ತರವಾದ ಅರ್ಥಗರ್ಭಿತವಾದ ಹೆಸರು ಅದು ಜನೆವರಿ ೧೯೪೩ ರಲ್ಲಿ ಜಾರ್ಜ ವಾಶಿಂಗ್ಟನ್ ಕಾರ್ವರನು ಸತ್ತಾಗ ಅಮೇರಿಕೆಯ ಯುದ್ಧದಲ್ಲಿ ಪ್ರವೇಶಿಸಿ ಒಂದು ವರ್ಷಕ್ಕಿಂತ ಸ್ವಲ್ಪಹೆಚ್ಚಾಗಿತ್ತು. ಸ್ವಲ್ಪವೇ ದಿನಗಳಲ್ಲಿ ಕಾರ್ವರನ ಹೆಸರನ್ನು ಹೊತ್ತ "ಸ್ವಾತಂತ್ರ್ಯ" ಹಡಗೊಂದು ನೀರಲ್ಲಿ ಇಳಿಯಿತು. ಸ್ವಾತಂತ್ರ್ಯಕ್ಕೋಸ್ಕರ ಇಷ್ಟೆಲ್ಲ ಬೆಲೆ ತೆತ್ತ ಕಾರ್ವರನ ಹೆಸರಿಗೆ ಅದು ತಕ್ಕ ಗೌರವವಾಗಿತ್ತು. ಆದರೆ ಅದು ಉದ್ದೇಶಪೂರ್ವಕವಾಗಿ ಕೊಟ್ಟ ಗೌರವವಲ್ಲ; ಏಕೆಂದರೆ ಸ್ವಾತಂತ್ರ್ಯದ ಸಾರ ಅದ

(೧೦ ನೇ ಪುಟ ನೋಡಿರಿ)

## ಕಥಾ ಕಾಲಕ್ಷೇಪ

[ಆರ್. ಸಿ. ಟ್ರೆವಿಲ್ಯನ್ನರ "ವಿಂಡ್ ಫಾಲ್ಸ" ಪುಸ್ತಕದಿಂದಾಯ್ದುದು. ಪ್ರಕಾಶಕರು ಅಲೆನ್ ಮತ್ತು ಅನ್ವಿನ್] ವಿ. ಜಿ.ಡಿ.

ಒಮ್ಮೆ ಬೋಧಿಸತ್ವನು ಆನೆಯಾಗಿ ಜನ್ಮವೆತ್ತಿದನು ಅವನು ಪೂರ್ಣ ಪ್ರಮಾಣಕ್ಕೆ ಬೆಳೆದು ದೊಡ್ಡ ಆನೆಗಳ ಹಿಂಡಿಗೆ ಒಡೆಯನಾದಾಗ ತನ್ನ ಜತೆಗಾರರನ್ನು ಬಿಟ್ಟು ಸಾಲ್ಕು ಸುತ್ತ ನಿರ್ಜಲ ಮರುಭೂಮಿಯಿಂದ ಆವರಿಸಲ್ಪಟ್ಟ ದೂರದ ಒಂದು ಅಡವಿಗೆ ಹೊರಟುಹೋದನು. ಅಲ್ಲಿ ಅವನು ಮುನಿಯಂತೆ ಮರಗಳ ಎಲೆ ಹಣ್ಣುಗಳನ್ನೂ ಕಮಲನಾಳಗಳನ್ನೂ ತಿಂದು ಜಲಾಶಯಗಳಲ್ಲಿ ಕುಡಿದು ಬಾಳಿ ಅದರಲ್ಲೇ ಆನಂದವನ್ನು ಅನುಭವಿಸತೊಡಗಿದನು.

ಹೀಗಿರಲು, ಒಂದುದಿನ ಅವನು ಆ ಅಡವಿಯ ಗಡಿಯಲ್ಲಿ ಅಡ್ಡಾಡುತ್ತಿದ್ದಾಗ ಯಾರೋ ಬಹಳ ಜನರು ಅಳುತ್ತ ಗೋಳಿಡುತ್ತ ಇರುವ ಶಬ್ದವನ್ನು ಕೇಳಿದನು. ಆದರಿಂದ, ಅವನು ಆ ಶಬ್ದ ಬರುತಿದ್ದ ದಿಕ್ಕಿನಲ್ಲಿ ವೇಗವಾಗಿ ಧಾವಿಸಿ ಅಡವಿಯಿಂದ ಹೊರಗೆ ಬಂದನು. ದೂರದಲ್ಲಿ ನೂರಾರು ಜನರು, ಕೆಲವರು ಕುಳಿತು ಕೆಲವರು ನೆಲದ ಮೇಲೆ ಹೊರಳುತ್ತ, ಹಸಿವು ನೀರಡಿಕೆ ಬಳಲಿಕೆಗಳನ್ನು ಸಹಿಸಲಾರದೆ ಅಳುತಿದ್ದುದು ಕಾಣಬಂತು. ಅಷ್ಟು ದೊಡ್ಡ ಆನೆಯನ್ನು ನೋಡಿ ಅವರು ಹೆದರಿ ಕಂಗಾಲಾದರೂ ಓಡುವಷ್ಟು ಶಕ್ತಿ ಕೂಡ ಅವರಲ್ಲಿದ್ದಿಲ್ಲ. ಆ ಮಹಾ ಪ್ರಾಣಿ ತನ್ನ ಸೊಂಡಿಲನ್ನು ಎತ್ತಿ ಮೈತ್ರಿ ಸೂಚಕವಾಗಿ ಮೆಲ್ಲ ಮೆಲ್ಲನೆ ಅಲ್ಲಾಡಿಸುತ್ತ ಅವರನ್ನು ಮೆಲ್ಲಗೆ ಸಮೀಪಿಸಿ, ಮನುಷ್ಯವಾಣಿಯಲ್ಲಿ ಹೀಗೆ ಹೇಳಿತು: "ಹೆದರಿಕೆ ಬೇಡ. ನೀವಾರು ಭೋ? ನೀವು ಈ ವಿಪತ್ತಿನಲ್ಲಿ ಹೇಗೆ ಸಿಲುಕಿದಿರಿ?"

ಇದರಿಂದ ಧೈರ್ಯಗೊಂಡವರಾಗಿ ಆ ಇಡಿ ಜನ ಸಮೂಹ ಎದ್ದು ನಿಂತು ಅವನಿಗೆ ತಲೆವಾಗಿತು. ಅವರಲ್ಲಿ ಹಿರಿಯನೊಬ್ಬನು ಹೇಳಿದ್ದು: "ಭೋ ಗಜರಾಜನೇ, ಅರಸನ ಕ್ರೂರ ಕೋಪದ ಬಿರುಗಾಳಿ ನಮ್ಮನ್ನು ಈ ಮರುಭೂಮಿಗೆ ಗಡಿಪಾರುಮಾಡಿತು. ಆದರೂ ನಿನ್ನ ಮಂಗಲದರ್ಶನದಿಂದ ನಾವು ಅನಾಹುತದ ಮರುಭೂಮಿಯನ್ನು ದಾಟಿದ್ದೇವೆಂದು ನಂಬಿದ್ದೇವೆ."

ಆಗ ಆನೆ ಕೇಳಿತು: "ನೀವೆಷ್ಟು ಮಂದಿ, ಭೋ?"

"ನಾವು ಮನೆಗಳಿಂದ ಅಟ್ಟಲ್ಪಟ್ಟಾಗ ೫೦೦ ಜನರಿದ್ದೆವು" ಎಂದಾ ಹಿರಿಯನು ಉತ್ತರವಿತ್ತನು. "ಆದರೆ ನಮ್ಮಲ್ಲನೇಕರು ಹಸಿವೆ ನೀರಡಿಕೆ ಆಯಾಸಗಳಿಂದ ನಷ್ಟವಾಗಿ ಹೋಗಿರುವರು."

ಆಗ ಕಾರುಣ್ಯತುಂದಿಲವಾಗಿ ಆ ಮಹಾಪ್ರಾಣಿ ಹೇಳಿತು: "ಅಕಟಕಟಾ! ಈ ನಿಸ್ಸಹಾಯರಾದ ಅರಸರು ತಮ್ಮ ಸ್ವಂತ ಹಿತವನ್ನು ಕೂಡ ಕಾಣಲಾರದಷ್ಟು ಕುರುಡರಾಗಿರುವರಲ್ಲಾ! ಪ್ರಜಾಪೀಡನೆಯಿಂದೊದಗಿದ ಮಹಾ ವಿಪ್ಲವ ಅವರನ್ನೆಲ್ಲ ಅವರ ಸಮಸ್ತ ಅನ್ಯಾಯ ಕ್ರೌರ್ಯಗಳಿಂದ ಸುಟ್ಟು ಹಾಕಬಹುದೆಂದು ಅವರರಿಯರು. ಇಂಥ ಅಜ್ಞಾನಕ್ಕೆ ಧಿಕ್ಕಾರ!" ಮತ್ತು ಅದು ನೀರವವಾಗಿ ನಿಂತು, ತನ್ನ ಅತಿಥಿಗಳಿಗೆ ತಾನೆಂತು ಸತ್ಕಾರ ಮಾಡಬೇಕೆಂದು ಚಿಂತಿಸುತ್ತಿರಲು, ಆ ಜನರು ಕಣ್ಣೀರುದುಂಬಿ ಕೈಜೋಡಿಸಿ, ಆ ಭಯಂಕರ ಮರುಭೂಮಿಯಿಂದ ಪಾರಾಗುವ ಬಗೆಯನ್ನು ತೋರಿಸೆಂದು, ಇಲ್ಲದಿದ್ದರೆ ಜೀವನದಾಯಿಯಾದ ಒಂದು ನದಿಯನ್ನಾಗಲಿ ಜಲಾಶಯವನ್ನಾಗಲಿ ತೋರಿಸೆಂದು ಪ್ರಾರ್ಥಿಸಿದರು.

ಆಗ ಅವನು ತನ್ನ ಸೊಂಡಿಲವನ್ನೆತ್ತಿ ಉತ್ತರದ ಕಡೆ ಬೀಸುತ್ತ, ಅಂದಿತು: "ಆ ಕಡಿದಾದ ಗುಡ್ಡದ ಕೆಳಗೆ ಒಂದು ಶುದ್ಧ ಜಲದ ಕೊಳ್ಳವಿದೆ. ಅಲ್ಲಿ ನೀವು ನೀರಡಿಕೆಯನ್ನು ಪರಿಹರಿಸಿಕೊಂಡು ಕೆಲಹೊತ್ತು ವಿಶ್ರಮಿಸಬಹುದು. ಆ ಮೇಲೆ ಮುಂದೆ ಸಾಗಿ ಅನತಿದೂರದಲ್ಲಿ ಒಂದು ಆನೆಯ ಕಳೇವರನ್ನು ಕಾಣುವಿರಿ. ಅದು ಇಂದೇ ಪರ್ವತಶಿಖರದಿಂದ ಕೆಳಗೆ ಉರುಳಿದ್ದು ಪರ್ವತದ ಬುಡದಲ್ಲಿ ಬಿದ್ದಿದೆ. ಅದರ ಮಾಂಸವನ್ನು ಆಹಾರವಾಗಿ ತೆಗೆದುಕೊಳ್ಳಿರಿ. ಅವನ ಜಠರಕೋಶದಿಂದ ಚೀಲಗಳನ್ನು ಮಾಡಿಕೊಂಡು ಸರೋವರದಿಂದ ನೀರು ತುಂಬಿಕೊಳ್ಳಿರಿ. ಈ ರೀತಿ ಪಾಥೇಯ ಪಡೆದವರಾದ ನೀವು ಈ ಅರಣ್ಯದಿಂದ ಕಷ್ಟವಿಲ್ಲದೆ ಪಾರಾಗುವಿರಿ."

ಇಷ್ಟು ಹೇಳಿ ಅವನು ಅವರನ್ನು ಬಿಟ್ಟು ಅವರ ಕಣ್ಣೋಟದಿಂದ ಪಾರಾಗಿ ಆ ಪರ್ವತದ ಆ ಬದಿಯನ್ನೇರಿದನು ಮತ್ತು ಒಂದು ಅಗಾಧವಾದ ಕಂದರದಲ್ಲಿ ಹಾರಿ ಕೆಳಗಿದ್ದ ಬಂಡೆಗೆ ಬಡಿದು ಪ್ರಾಣ ಬಿಟ್ಟನು.

ಅತ್ತ ಆ ಜನರು ಅವನ ಸೂಚನೆಯಂತೆ ಸಾಗಿ ಬೇಗನೆ ಸರೋವರವನ್ನು ತಲುಪಿದರು ಮತ್ತು ನೀರು ಕುಡಿದು ಸ್ವಲ್ಪ ವಿಶ್ರಮಿಸಿಕೊಂಡರು. ಆ ಮೇಲೆ ಅವರು ಮುಂದುವರಿಯುತ್ತ ಹೋಗಿ ಒಂದು ಆನೆಯ ದೇಹವನ್ನು ಕಂಡರು. ಆಗ ಅವರಲ್ಲಿ ಕೆಲವರು ಹೇಳಿದರು! "ಈ ಆನೆ ನಮ್ಮ ಗೆಳೆಯನಾದ ಆ ಗಜರಾಜನನ್ನು ಎಷ್ಟು ಹೋಲುತ್ತದೆ!" ಬೇರೆ ಕೆಲವರು ಅಂದುಕೊಂಡರು: "ಈ ಆನೆ ನಮ್ಮಾ ಗೆಳೆಯನೇ ಆಗಿರಬೇಕು. ಅವನು ಪರ್ವತಶಿಖರದಿಂದ ಹಾರಿಕೊಂಡು ನಮ್ಮನ್ನು ವಿಪತ್ತಿನಿಂದ ಉಳಿಸಲು ಬಯಸಿರಬೇಕು."

ಪುಣೆ,
೨—೧೨—೪೬

## ವಾಚಕರಿಗೆ

ಮಹಾತ್ಮಾ ಗಾಂಧಿಯವರು 'ಹರಿಜನ' ಪತ್ರಿಕೆಗಳ ಸಂಪಾದನ ಕಾರ್ಯವನ್ನು ಯಾವ ಸಂದರ್ಭದಲ್ಲಿ ಶ್ರೀ ವಿನೋಬಾ, ಕಾಕಾ ಸಾಹೇಬ ಕಾಲೇಲಕರ, ಕಿಶೋರಲಾಲ ಮಶ್ರೂವಾಲಾ ಮತ್ತು ನರಹರಿ ಪರೀಖ ಇವರಿಗೆ ಒಪ್ಪಿಸಿದರೆಂಬುದು ವಾಚಕರಿಗೆ ಈಗಾಗಲೆ ಗೊತ್ತಾಗಿರಲಿಕ್ಕಿಲ್ಲ ಸಾಕು. ಗಾಂಧೀಜಿ, ಪ್ಯಾರೇಲಾಲರು ಮತ್ತು ಗಾಂಧೀಜಿಯವರು ದಲದ ಉಳಿದ ಸಂಗಡಿಗರು ಬಂಗಾಲದಲ್ಲಿಯ ಹಿಂದೂ-ಮುಸಲ್ಮಾನರಲ್ಲಿ ಪುನಃ ಮಿತ್ರತ್ವವನ್ನು ಶಾಶ್ವತಗೊಳಿಸುವ ಮಹತ್ವದ ಕಾರ್ಯದಲ್ಲಿ ತೊಡಗಿರುವವರೆಗೆ ಈ ನಾಲ್ವರು ಸಜ್ಜನರು ಕೂಡಿಕೊಂಡು ಇಲ್ಲವೆ ಪ್ರತ್ಯಪ್ರತ್ಯೇಕವಾಗಿ ಈ ಸಂಪಾದನಕಾರ್ಯವನ್ನು ಸಾಗಿಸಬೇಕೆಂದು ಗಾಂಧೀಜಿ ಪ್ರಾರ್ಥಿಸಿಕೊಂಡಿರುವರು. ಆದರೆ ಈಗ ಈ ನಾಲ್ಕು ಜನ ಸಜ್ಜನರು ಒಬ್ಬರಿಗೊಬ್ಬರು ಬಹಳ ದೂರ ದೂರ ಇರುತಿರುವರು. ಮತ್ತು ಒಂದೆಡೆ ಒಬ್ಬಗೊಬ್ಬರು ಭೆಟ್ಟಿಯಾಗಲೂ ಶಕ್ಯವಿರುವದಿಲ್ಲ. ಶ್ರೀ ನರಹರಿ ಪರೀಖರೊಬ್ಬರೆ ಸಾಬರಮತಿಯಲ್ಲಿರುವರು. ಮತ್ತು ಸುಲಭವಾಗಿ ನನಗೆ ಲಭ್ಯರಿರುವರು. ಆದುದರಿಂದ ಇವರೆಲ್ಲರ ಬರೆಹಗಳು ನೇರವಾಗಿ ನನ್ನ ಕಡೆಗೆ ಬರುವವು. ಇವರಲ್ಲಿ ಬೇರೊಬ್ಬರಿಗಾರಿಗೂ ಅವನ್ನು ನೋಡಲು ಶಕ್ಯವಿರುವದಿಲ್ಲ. ಹಾಗೆಯೆ ಗಾಂಧಿ ನಿರೀಕ್ಷಿಸಲ್ಪಡುವವು.

ಸಾಮಾನ್ಯವಾಗಿ ತಾವು ಸ್ವತಃ ಯಾವುದನ್ನೂ ಪರೀಕ್ಷಿಸದೆ ಗಾಂಧೀಜಿ ಮತ್ತು ಪ್ಯಾರೇಲಾಲಜಿಯವರು ಹರಿಜನ ಪತ್ರಿಕೆಯಲ್ಲಿ ಪ್ರಸಿದ್ಧಿಸಲು ಒಪ್ಪುವದಿಲ್ಲ. ಆದರೆ ಅವರು ಮರಳಿ ಬರುವವರೆಗೆ ಇದು ಶಕ್ಯವಿರುವದಿಲ್ಲ. ಆದುದರಿಂದ ಈಗ ಹರಿಜನ ಪತ್ರಿಕೆಗಳಲ್ಲಿ ಪ್ರಸಿದ್ಧವಾಗುತಿರುವ ಯಾವದೇ ಅಭಿಪ್ರಾಯವು ಪ್ರಸಿದ್ಧವಾಗುವ ಮೊದಲು ಗಾಂಧೀಜಿ ಇಲ್ಲವೆ ಪ್ಯಾರೇಲಾಲಜಿಯವರ ಒಪ್ಪಿಗೆಯನ್ನು ಪಡೆದಿದೆಯೆಂದು ವಾಚಕರು ದಯವಿಟ್ಟು ಭಾವಿಸಬಾರದು—

—ಮ್ಯಾನೇಜಿಂಗ ಎಡಿಟರ

( ೯ನೇ ಪುಟದಿಂದ )

ರಲ್ಲಿಲ್ಲ. ಕಾರ್ವರನು ಬಾಳಿದ ಸಮಾಜ ಅವನಿಗೆ ತನ್ನ ಸ್ವಂತ ಪ್ರಗತಿಯನ್ನೂ ಭವಿತವ್ಯವನ್ನೂ ನಿರ್ಣಯಿಸಿಕೊಳ್ಳುವ ಸ್ವಾತಂತ್ರ್ಯವನ್ನು ಕೊಟ್ಟಿತ್ತು. ಅವನ ಸೇವೆಗಳು ಈ ಸಮಾಜಕ್ಕೆ ಬೇಡದೆ ದೊರೆತ ಯದೃಚ್ಛಾ ಲಾಭಗಳು. ಜುಲೈ ೧೯೪೩ರಲ್ಲಿ ಅಮೇರಿಕನ್ ಕಾಂಗ್ರೆಸ್ಸು ಮಿಸೋರಿಯ ಡಾಯಮಂಡ ಗ್ರೋವಿನಲ್ಲಿ, ಕಾರ್ವರನು ಗುಲಾಮನಾಗಿ ಜನ್ಮವೆತ್ತಿ ಜಗತ್ತನ್ನು ಕಂಡ ಸ್ಥಳದಲ್ಲಿ, ಒಂದು ಸ್ಮಾರಕವನ್ನು ಸ್ಥಾಪಿಸಲು ಹಣವನ್ನು ದಯಪಾಲಿಸಿತು.

## ಘಟನಾ ಸಮಿತಿಯ ಧ್ಯೇಯ ನಿರೂಪಣೆ

### ಪಂ. ಜವಾಹರಲಾಲರ ಗೊತ್ತುವಳಿ

ಪಂಡಿತ ಜವಾಹರಲಾಲರು ಹಿಂದುಸ್ಥಾನದ ರಾಜ್ಯಘಟನೆ ಯಾವ ತತ್ವಗಳ ಮೇಲೆ ನಿರ್ಮಿಸಲ್ಪಡಬೇಕೆಂದು ಉಲ್ಲೇಖಿಸುವ ಗೊತ್ತುವಳಿಯೊಂದನ್ನು ಮೊದಲನೆಯದಾಗಿ ಘಟನಾ ಸಮಿತಿಯ ಸಭೆಯಲ್ಲಿ ತಾ ೧೩ಕ್ಕೆ ಮಂಡಿಸಿದರು. ಅದು ಹಿಂದುಸ್ಥಾನವನ್ನು ಸ್ವತಂತ್ರ ಸಾರ್ವಭೌಮ ಪ್ರಜಾರಾಜ್ಯವೆಂದು ಉದ್ಘೋಷಿಸುತ್ತದೆ. ಅದಕ್ಕೆ ೪೦ ತಿದ್ದುಪಡಿಗಳು ಮಂಡಿಸಲ್ಪಟ್ಟದ್ದು ಡಾ. ಜಯಕರರ ಹಾಗು ಸೋಮನಾಥ ಲಾಹಿರಿಯವರ ತಿದ್ದುಪಡಿಗಳು ಮಹತ್ವದವಾಗಿವೆ.

#### ಜವಾಹರರ ಗೊತ್ತುವಳಿ

"ಹಿಂದುಸ್ಥಾನವು ಸ್ವತಂತ್ರ ಸಾರ್ವಭೌಮ ಪ್ರಜಾರಾಜ್ಯವೆಂದು ಮತ್ತು ಅದರ ಭಾವೀ ಆಡಳಿತಕ್ಕಾಗಿ ಇಂದಿನ ಬ್ರಿಟಿಶ್ ಹಿಂದುಸ್ಥಾನ, ದೇಶೀಯ ಸಂಸ್ಥಾನಗಳು, ಇವೆರಡು ಪ್ರದೇಶಗಳ ಹೊರಗಿರುವ ಹಿಂದುಸ್ಥಾನದ ಇತರ ಪ್ರದೇಶಗಳು ಹಾಗೂ ಹಿಂದುಸ್ಥಾನದಲ್ಲಿ ಸೇರಬಯಸುವ ಬೇರೆ ಪ್ರದೇಶಗಳು ಇವುಗಳನ್ನೊಳಗೊಂಡ ಹಿಂದುಸ್ಥಾನ ಒಕ್ಕೂಟಕ್ಕಾಗಿ ಒಂದು ರಾಜ್ಯಘಟನೆ ರಚಿಸಲಾಗುವದೆಂದು ಈ ಘಟನಾ ಸಮಿತಿಯು ಈ ಮೂಲಕ ತನ್ನ ದೃಢ ಹಾಗೂ ಗಂಭೀರ ನಿರ್ಧಾರವನ್ನು ಸಾರಿ ಹೇಳುತ್ತದೆ.

ಅದರಲ್ಲಿ ಮೇಲ್ಕಾಣಿಸಿದ ಪ್ರದೇಶಗಳಿಗೆ— ಅವು ಈಗಿನ ಮೇರೆಗಳಂತೆಯೇ ಇರಲಿ ಅಥವಾ ಘಟನಾ ಸಮಿತಿಯು ನಿರ್ಣಯಿಸಿದಂತೆ ಬೇರೆ ಮೇರೆಗಳಂತಾಗಲಿ ಮತ್ತು ಅನಂತರ ಘಟನೆಯ ಕಾಯಿದೆಯಂತೆ ವ್ಯತ್ಯಸ್ತವಾದ ಸೀಮೆಗಳನ್ನೊಳಗೊಂಡಿರಲಿ, ಶೇಷಾಧಿಕಾರದೊಂದಿಗೆ ಪೂರ್ಣ ಸ್ವಾಯತ್ತತೆಯಿಂದ ಲಭ್ಯವಾಗತಕ್ಕದ್ದು. ಮತ್ತು ಹಿಂದುಸ್ಥಾನದ ಒಕ್ಕೂಟ ಸರಕಾರಕ್ಕೆ ಬಿಟ್ಟು ಕೊಟ್ಟ ಅಥವಾ ಅದಕ್ಕೆ ಅಂತರ್ಗತ ಅಧಿಕಾರದಿಂದ ಪ್ರಾಪ್ತವಾಗುವ ಅಧಿಕಾರಗಳನ್ನು ಬಿಟ್ಟು ಉಳಿದ ವಿಷಯಗಳಲ್ಲಿ ಅವು ಸರಕಾರದ ಎಲ್ಲ ವ್ಯವಹಾರಗಳನ್ನು ನಡೆಸಬಹುದು; ಮತ್ತು ಸಾರ್ವಭೌಮ ಸ್ವತಂತ್ರ ಹಿಂದುಸ್ಥಾನದ, ಅದರ ಅಂಗಗಳ ಹಾಗೂ ಸರಕಾರಗಳ ಅಧಿಕಾರವು ಜನತೆಯಿಂದ ಉಗಮವಾಗುತ್ತದೆ ಮತ್ತು ಸ್ವತಂತ್ರ ಹಿಂದುಸ್ಥಾನದಲ್ಲಿ ಸಮಸ್ತ ಪ್ರಜಾಕೋಟಿಗೆ ನ್ಯಾಯ, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಸಮಾನ ಸ್ಥಿತಿ, ಅವಕಾಶ ಸಮತೆ, ವಿಚಾರ, ಆಚಾರ, ಅರ್ಚನ, ಧರ್ಮ, ಉದ್ಯೋಗ, ಸಂಘ ಮತ್ತು ಕೃತಿ ಸ್ವಾತಂತ್ರ್ಯ ಇವು ಕಾಯದೆಯಂತೆ ಹಾಗೂ ಸಾರ್ವಜನಿಕ ನೀತಿಗನುಸರಿಸಿ ದೊರಕುವಂತೆ ಆಶ್ವಾಸನ ಕೊಡಲಾಗುವದು; ಮತ್ತು ಸ್ವತಂತ್ರ ಹಿಂದುಸ್ಥಾನದಲ್ಲಿ ಅಲ್ಪಸಂಖ್ಯಾಕರು, ಹಿಂದುಳಿದವರು ಗುಡ್ಡಗಾಡ ಜನರು, ದಲಿತ ವರ್ಗದವರು ಹಾಗೂ ಬೇರೆ ಹಿಂದುಳಿದ ಜಾತಿಯವರಿಗೆ ಸಾಕಷ್ಟು ಸಂರಕ್ಷಣೆಯನ್ನೊದಗಿಸಲಾಗುವದು; ಮತ್ತು ಪ್ರಜಾರಾಜ್ಯದ ಪ್ರದೇಶಗಳ ಅಖಂಡತನವನ್ನು ಹಾಗೂ ಭೂ, ಜಲ ವಾಯು, ಪ್ರದೇಶಗಳಲ್ಲಿ ಅದರ ಸಾರ್ವಭೌಮ ಹಕ್ಕುಗಳು ನ್ಯಾಯ ಮತ್ತು ಸುಸಂಸ್ಕೃತ ರಾಷ್ಟ್ರಗಳ ಕಾಯದೆಪದ್ಧತಿಗನುಸರಿಸಿ ರಕ್ಷಿಸಲಾಗುವವು. ಮತ್ತು ಈ ಪ್ರಾಚೀನ ರಾಷ್ಟ್ರವು ಪ್ರಪಂಚದಲ್ಲಿ ಅಧಿಕಾರಪೂರ್ಣವಾದ ಸನ್ಮಾನ್ಯ ಸ್ಥಾನವನ್ನು ಗಳಿಸಿ ಜಾಗತಿಕ ಶಾಂತಿ ಹಾಗು ಮಾನವಜನಾಂಗದ ಹಿತರಕ್ಷಣೆಯಲ್ಲಿ ಸಹಾಯ ಮಾಡುವಂತೆ ಪ್ರಯತ್ನಿಸಲಾಗುವದು"

#### ತಿದ್ದುಪಡಿಗಳು

ಡಾ. ಎಂ ಆರ್. ಜಯಕರರ ತಿದ್ದುಪಡಿಯಲ್ಲಿ ಹಿಂದುಸ್ಥಾನದ ಭಾವೀ ಆಡಳಿತ ಸ್ವತಂತ್ರ ಹಾಗು ಪ್ರಜಾಸತ್ತಾತ್ಮಕ ಪದ್ಧತಿಗನುಸಾರವಾಗಿ ನಡೆಯುವಂತೆ ರಾಜ್ಯಘಟನೆ ರಚಿಸುವದೇ ಈ ಸಭೆಯ ಉದ್ದೇಶವೆಂದು ಹೇಳಲ್ಪಟ್ಟದ್ದರೂ ಮುಸ್ಲಿಂಲೀಗ, ಹಿಂದೀ ಸಂಸ್ಥಾನಗಳ ಸಹಕಾರವನ್ನು ದೊರಕಿಸುವ ಉದ್ದೇಶದಿಂದ ಮತ್ತು ಆ ಎರಡೂ ಪಂಗಡಗಳಿಗೆ ಸಭೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸಲು ಅನುಕೂಲವಾಗುವಂತೆ ಈ ಪ್ರಶ್ನೆಯ ವಿಚಾರವನ್ನು ಕೆಲಕಾಲ ಮುಂದೆ ಹಾಕಬೇಕು, ಎಂದು ಆಶಿಸಲಾಗಿದೆ.

ಪಂ. ಜವಾಹರಲಾಲರು ತಮ್ಮ ಗೊತ್ತುವಳಿಯ ಮೇಲೆ ವಿಸ್ತೃತ ಭಾಷಣ ಮಾಡಿದ್ದು ಅದರಲ್ಲಿ ಈಚೆಗೆ ಲಂಡನ್ನಿನಲ್ಲಿ ನಡೆದ ಪರಿಷತ್ತಿನ ಮಾತೆತ್ತಿ, ಬ್ರಿಟಿಶ ಸರಕಾರದ ಹೇಳಿಕೆಯಿಂದ ಘಟನಾ ಸಮಿತಿಯ ಕೆಲಸ ಸುಗಮವಾಗುವ ಬದಲು ಕಠಿನವಾಗಿದೆಯೆಂದು ಟೀಕಿಸಿದರು.

## ಉರುಳಿ ಕಾಂಚನದ ವರದಿ

( ೮ನೇ ಪುಟದಿಂದ )

ಪೋಟೇಸದೊಂದಿಗೆ ನಿಯಮಿತ ಪಥ್ಯ ಹೇಳುವದು ಮೊದಲಾದವುಗಳೆಲ್ಲ ಚಿಕಿತ್ಸೆಯಲ್ಲಿ ಒಳಗೊಂಡಿದ್ದವು. ಪಥ್ಯ ಎಂದರೆ ನಿಂಬೀರಸ, ಜೇನುತುಪ್ಪ, ಕಿತ್ತಳೆ ಹಣ್ಣು ಮತ್ತು ಉಳಿದ ಅಮ್ಲಫಲಗಳು, ನೆನೆಸಿಟ್ಟ ಮತ್ತು ಮೊಳಕೆಯೊಡೆದ ಅವರೆ, ಸಿಹಿ ಹಣ್ಣುಕಾಯಿ ಮೊದಲಾದವುಗಳು ಭಕ್ತರೆ ಚಪಾತಿ ಮತ್ತು ಉಪ್ಪಿಲ್ಲದ ಪಲ್ಲೆ, ಮೆಣಸಿನಕಾಯಿ ಮತ್ತು ಮಸಾಲೆ ಬೆರಸಿದ ಆಹಾರವನ್ನೊಳಗೊಳ್ಳುವವು. ಪೂರ್ಣ ಅನ್ನಾರೋಧ ಮತ್ತು ಕಿಚಡಿಯನ್ನೂ ಹಲವು ಸಲ ಉಪಯೋಗಿಸಲಾಗುತ್ತದೆ. ಮೊಸರು ಮತ್ತು ಮಜ್ಜಿಗೆಯನ್ನು ಅವಶ್ಯವಿದ್ದಾಗ ಒಂದೊತ್ತಿನ ಊಟಕ್ಕಾಗಿ ಬೇಕಾದಷ್ಟು ಉಪಯೋಗಿಸಲಾಗುತ್ತದೆ.

ರೋಗಿಯ ಆರೋಗ್ಯ ಪರಿಸ್ಥಿತಿ ಮತ್ತು ಆರ್ಥಿಕ ಪರಿಸ್ಥಿತಿಗನುಸಾರವಾಗಿ ದಿನದ ವೆಚ್ಚ ಸರಾಸರಿ ೮ ಆಣೆಯಿಂದ ಎರಡು ರೂಪಾಯಿಗಳವರೆಗೆ ಬರುವದು.

### ರೋಗಗಳ ವರ್ಗೀಕರಣ

| ಬೇನೆ | ಸಂಖ್ಯೆ | ಬೇನೆ | ಸಂಖ್ಯೆ |
|---|---|---|---|
| ಹರುಕು ಕಜ್ಜಿ | ೮೬ | ಮಲೇರಿಯಾ | ೫೮ |
| ಮಲಾವರೋಧ | ೫೬ | ಜ್ವರ (ಸಾದಾ | ೩೯ |
| ಕಿವಿ ಬೇನೆ | ೪೪ | ಗಾಯಗಳು | ೩೦ |
| ಹೊಟ್ಟೆನೋವು | ೨೪ | ಸಂಧಿ ಬೇನೆ | ೧೯ |
| ಬಾವು | ೧೬ | ಹಲ್ಲುಕೀಳುವದು | ೧೬ |
| ಅತಿಸಾರ | ೧೫ | ವಾಮುಲ | ೧೬ |
| ಅಗ್ನಿಮಾಂದ್ಯ | ೧೩ | ಹಲ್ಲುನೋವು | ೧೨ |
| ಕೆಮ್ಮು (ಬ್ರಾಂಕಾಯಟಿಸ್) | ೧೧ | ಸೆರಗುಹೋಗುವದು | ೧೯ |
| ಗಜಕರ್ಣ | ೮ | ಗಂಡಸ್ಫೋಟಿ | ೮ |
| ಆಮಾಂಶ | ೮ | ಇಸಬು | ೬ |
| ತಲೆನೋವು | ೫ | ದಮ್ಮು | ೫ |
| ರಕ್ತಕ್ಷಯ | ೫ | ಜಂತು | ೪ |
| ಕ್ಷಯವಿಕಾರ | ೪ | ಆಮ್ಲ ಅಗ್ನಿಮಾಂದ್ಯ | ೪ |
| ಮೂಲವ್ಯಾಧಿ | ೪ | | |
| ಪಕ್ಷವಾಯು | ೩ | ಸ್ಥೂಲ ಪ್ರಕೃತಿ | ೩ |
| ಪಾರ್ಶ್ವಶೂಲಿ | ೨ | ಸಂದುತಪ್ಪಿದ್ದು | ೨ |
| ಅರೆತಲೆಶೂಲಿ | ೨ | ಜಾಡ್ಯ | ೧ |
| ಪಿತ್ತವಿಕಾರ | ೧ | ಹೆರಿಗೆ | ೧ |
| ಸಂಧಿವಾತ | ೧ | ಕಫ | ೧ |
| ಅತಿಪಿತ್ತ | ೧ | ನಾಯಿಕಡಿತ (ಹುಚ್ಚನಾಯಿಅಲ್ಲ) | ೧ |
| ಆಸನಕುರುವು | ೧ | ಕಿರಕಳು | ೩೧ |
| | | ಒಟ್ಟು | ೫೬೬ |

ಇನ್ನು ಮುಂದಿನ ನಮ್ಮ ಆಸ್ಪತ್ರಿ ಯೋಜನೆಯಲ್ಲಿ ಹೆರಿಗೆ ವ್ಯವಸ್ಥೆಯನ್ನು ಪ್ರತ್ಯೇಕವಾಗಿ ಮಾಡಬೇಕೆಂದು ಬಗೆದಿದ್ದೇವೆ. ಸಣ್ಣದೊಂದು ಶಸ್ತ್ರ ಚಿಕಿತ್ಸಾಲಯವನ್ನೂ ಏರ್ಪಡಿಸಬೇಕೆಂದು ಮಾಡಿದ್ದೇವೆ. ಇದಲ್ಲದೆ ಗೋ ಸೇವೆಯನ್ನು ಸಂಘಟಿಸಬೇಕೆಂದೂ ಮಾಡಿದ್ದೇವೆ. ಇದರಿಂದ ಶುದ್ಧ ಹಾಲು ರೋಗಿಗೆ ಸಿಕ್ಕುವದು. ದನಗಳ ಹಟ್ಟಿಯನ್ನು ಕಟ್ಟಿಸಬೇಕೆಂದು ಮಾಡಿದ್ದೇವೆ. ಇದಕ್ಕಾಗಿ ಸುಮಾರು ೫೦೦೦ ರೂಪಾಯಿಗಳ ವೆಚ್ಚ ಮಾಡಬೇಕಾಗುವದು. ಸಕಾಲದಲ್ಲಿ ಯೋಗ್ಯ ಜನರಿಂದ ನಮಗೆ ಸಹಾಯ ಸಿಕ್ಕುವುದೆಂದು ಆಶಿಸುತ್ತೇವೆ.

ಉರುಳಿಕಾಂಚನ ಎ. ಯು. ಭಾಗವತ
೧—೧೨—೪೬



# ಕ ರ್ನಾ ಟ ಕ

## ಧಾರವಾಡ

ಭಾರತ ಮಿಲ್ಲಿನ ಕೂಲಿಕಾರರಿಗೆ ಮಾರ್ಗದರ್ಶನ ಕೊಡುತಿರುವ ರಾಷ್ಟ್ರೀಯ ಗಿರಣಿ ಮಜೂರ ಸಂಘಕ್ಕೆ ಮುಂಬಯಿ ಸರಕಾರದವರು ಟ್ರೇಡಯೂನಿಯನ್ ಕಾನೂನಿನನ್ವಯ ಮನ್ನಣೆ ಕೊಟ್ಟಿದ್ದಾರೆ. ೭ ನೇ ತಾರೀಕು ಇದು ರಜಿಸ್ಟರಾಗಿದೆ.

ಧಾರವಾಡ ಜಿಲ್ಹಾ ಕಾಂಗ್ರೆಸ ಕಮೀಟಿಯ ಸಾಧಾರಣ ಸಭೆ ೧೯—೧೨—೪೬ನೇ ದಿನ ಗುರುವಾರ ಸಂಜೆ ೩ ಗಂಟೆಗೆ ಹುಬ್ಬಳ್ಳಿಯಲ್ಲಿ ಧಾರವಾಡ ಜಿಲ್ಹಾ ಕಾಂಗ್ರೆಸ ಕಮೀಟಿ ಕಚೇರಿಯಲ್ಲಿ ಕೂಡುವದು. ಜಿಲ್ಹಾ ಕಾಂಗ್ರೆಸ ಸಿವ್ಹಿಲ್ ಬೋರ್ಡಿನ ಘಟನೆ ಹಾಗು ನಿಯಮಾವಲಿಗಳನ್ನು ಮಾನ್ಯ ಮಾಡುವದು, ಧಾರವಾಡ ಜಿಲ್ಹಾ ಪುನರ್ರಚನಾ ಯೋಜನೆಯನ್ನು ಸಿದ್ಧಪಡಿಸಲು ಉಪಸಮಿತಿಯನ್ನು ನೇಮಿಸುವದು ಮೊದಲಾದ ವಿಷಯಗಳ ವಿಚಾರವಾಗುವದು. ಸದಸ್ಯರೆಲ್ಲ ಬರಬೇಕಾಗಿ ಅಧ್ಯಕ್ಷರು ಬಿನ್ನವಿಸುತ್ತಾರೆ.

ಧಾರವಾಡ ತಾಲೂಕ ರೈತ ಪರಿಷತ್ತನ್ನು ಇದೇ ಸೋಮವಾರ ೧೬ಕ್ಕೆ ಮಧ್ಯಾಹ್ನ ೨ ಗಂಟೆಗೆ ಹೆಬ್ಬಳ್ಳಿ ಗ್ರಾಮದಲ್ಲಿ ಕೂಡಿಸಲು ನಿರ್ಧರಿಸಿದೆ. ಶ್ರೀ ವೀರನಗೌಡ ಪಾಟೀಲರು ಅಧ್ಯಕ್ಷತೆ ವಹಿಸುವರು. ಮಂತ್ರಿವರ್ಯ ಶ್ರೀ ಜಿ.ಡಿ. ತಪಾಸೆಯವರು ಪರಿಷತ್ತಿನ ಪ್ರಾರಂಭೋತ್ಸವ ಜರುಗಿಸುವರು. ರೈತಪ್ರತಿನಿಧಿಗಳೆಲ್ಲ ಪರಿಷತ್ತಿಗೆ ಬರಬೇಕೆಂದು ತಾಲೂಕ ಕಾಂಗ್ರೆಸ ಕಮೀಟಿ ಅಧ್ಯಕ್ಷರು ಬಿನ್ನವಿಸುತ್ತಾರೆ.

ಭಾಷಾನ್ವಯ ಪ್ರಾಂತಗಳನ್ನು ಪುನರ್ಘಟಿಸುವದು ಅವಶ್ಯವಾಗಿದೆಂಬಾಶಯದ ಗೊತ್ತುವಳಿಯನ್ನು ಶ್ರೀ ಅಂದಾನೆಪ್ಪ ದೊಡ್ಡಮೇಟಿಯವರು ಮುಂಬಯಿ ಶಾಸನ ಸಭೆಯಲ್ಲಿ ಮಂಡಿಸಲು ಕಳಿಸಿರುವರು. ಈ ವಿಷಯವನ್ನು ಘಟನಾ ಸಮಿತಿ ಪ್ರಾರಂಭದಲ್ಲಿಯೆ ಕೈಕೊಳ್ಳಬೇಕೆಂದು ಮುಂಬಯಿ ಶಾಸನ ಸಭೆ ಕೇಂದ್ರ ಸರಕಾರದ ಮುಖಾಂತರ ಘಟನಾ ಸಮಿತಿಯನ್ನು ಬಿನ್ನವಿಸುತ್ತದೆ ಎಂದೂ ಈ ಗೊತ್ತುವಳಿಯಲ್ಲಿ ಕೇಳಿಕೊಳ್ಳಲಾಗಿದೆ.

ಕಡ್ಡೀಪೆಟ್ಟಿಗೆಯನ್ನು ೧॥ ಆಣೆಗೆ ಮಾರಿದ್ದರಿಂದ ರೋಣದಲ್ಲಿಯ ಒಂದು ಅಂಗಡಿಯಲ್ಲಿಯ ಎಲ್ಲ ಕಡ್ಡೀಪೆಟ್ಟಿಗೆಗಳನ್ನು ಜಪ್ತ ಮಾಡಲಾಯಿತೆಂದು ತಿಳಿಯುತ್ತದೆ.

ಗದುಗಿನಲ್ಲಿ ಎಲ್ಲ ಜಾತಿ ಹಾಗು ಅಭಿಪ್ರಾಯದ ನಾಗರಿಕರಬಂದುಸಂಯುಕ್ತ ಸಭೆ ಶ್ರೀ ಸಿ. ಎಸ್. ಹುಲಕೋಟಿಯವರ ಅಧ್ಯಕ್ಷತೆಯಲ್ಲಿ ೩ ನೇ ತಾರೀಕು ಸೇರಿತ್ತು. ಹಿಂದೂ-ಮುಸ್ಲಿಮರಲ್ಲಿ ಶಾಂತತೆಯನ್ನೂ ಸ್ನೇಹಸೌಹಾರ್ದಭಾವವನ್ನೂ ಬೆಳೆಸುವದಕ್ಕಾಗಿ ಒಂದು ಶಾಂತತಾ ಮಂಡಲವನ್ನು ಸ್ಥಾಪಿಸಲಾಯಿತು. ದಿ. ಬ. ಮಾನವಿಯವರು ಅದರ ಅಧ್ಯಕ್ಷರು. ರಾ. ಬ. ಯಳಮಲಿ, ರಾ. ಸಾ. ಚವ್ಹಾಣ, ಗುಲಾಮ ಹುಸೇನ ಅನಂತರಾವ ಜಾಲೀಹಾಳರು ಉಪಾಧ್ಯಕ್ಷರಾಗಿರುವರು.

## ಬೆಳಗಾವಿ

ಬೆಳಗಾವಿ ಕನ್ನಡಿಗರು ಕರ್ನಾಟಕ ದಿನವನ್ನು ೯ ನೇ ತಾರೀಕು ಆಚರಿಸಿದರು. ಬೆಳಿಗ್ಗೆ ಕನ್ನಡಿಗರ ಮೆರವಣಿಗೆ ಹೊರಟು ಬೀದಿಗಳಲ್ಲೆಲ್ಲ ಸುತ್ತಾಡಿ ಬಂದಿತು. ಸಾಯಂಕಾಲ ಡಾ. ತೆರಗುಂಡಿಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಹಾರನಹಳ್ಳಿರಾಮಸ್ವಾಮಿ, ಅಣ್ಣೂಗುರೂಜಿ, ರುದ್ರಪ್ಪಾ ದೇಸಾಯಿ ಮೊದಲಾದವರು ಭಾಷಣ ಮಾಡಿ ಘಟನಾ ಸಮಿತಿಯಲ್ಲಿ ಭಾಷಾನ್ವಯ ಪ್ರಾಂತರಚನೆಯ ವಿಚಾರ ಮಾಡಬೇಕೆಂದೂ ಅದಕ್ಕಾಗಿ ನಿಯಮಿಸುವ ಉಪಸಮಿತಿಯಲ್ಲಿ ಕರ್ನಾಟಕಕ್ಕೆ ಯೋಗ್ಯ ಪ್ರಾತಿನಿಧ್ಯವಿರಬೇಕೆಂದೂ ಕೇಳಿಕೊಳ್ಳಲಾಯಿತು.

ಇಂಡಿಯನ್ ಪ್ರೆಸ್ ಅಸೋಸಿಯೇಶನ್ನಿನ ಉದ್ಘಾಟನ ಸಮಾರಂಭ ೯ ನೇ ತಾರೀಕು ಶ್ರೀ ದೇಶಪಾಂಡೆ ಗಂಗಾಧರರಾಯರ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ಜರುಗಿತು. ಶ್ರೀ ತೇಲಕರರು ಭಾಷಣ ಮಾಡಿ ಸುದ್ದಿ ಸಂಗತಿಗಳನ್ನು ಪೂರಯಿಸುವ ಇಂಥ ಸಂಸ್ಥೆಗಳ ಅವಶ್ಯಕತೆಗಳನ್ನು ತಿಳಿಸಿ ಹೇಳಿ ಸದ್ಯಕ್ಕೆ ವಿದೇಶಿ ಸುದ್ದಿ ಸಂಸ್ಥೆಯವರು ಪ್ರತಿವರ್ಷ ೫೦–೬೦ ಲಕ್ಷ ರೂಪಾಯಿಗಳನ್ನು ತೆಗೆದುಕೊಂಡು ಭಾರತಕ್ಕೆ ವಿಕೃತ ಸುದ್ದಿಗಳನ್ನೇ ಕಳಿಸುತಿರುವರು. ಇದನ್ನು ಹೋಗಲಾಡಿಸಲು ಈ ಸಂಸ್ಥೆ ಸ್ಥಾಪಿಸಿದ್ದಾಗಿದೆಂದು ಮುಂತಾಗಿ ಹೇಳಿದರು ಪಂಡಿತ ಜವಾಹರಲಾಲರು ಇವರಿಗೆ ಶುಭಾಶಯ ಸಂದೇಶ ಕಳಿಸಿರುವರು.

ಬೆಳಗಾವಿ ಜಿಲ್ಹೆಯಲ್ಲಿ ಈ ವರ್ಷ ೪ಲಕ್ಷ ಚೀಲ ಧಾನ್ಯ ವಸೂಲಿಯಾಗುವದು. ಜಿಲ್ಹೆಗೆ ಅಷ್ಟು ಸಾಕಾಗುವದು. ಅದರಲ್ಲಿ ೧॥ ಲಕ್ಷ ಚೀಲ ಭತ್ತ ಇದೆಂದು ಕಲೆಕ್ಟರರು ಪತ್ರಿಕಾ ಪರಿಷತ್ತಿನಲ್ಲಿ ಹೇಳಿದರು.

## ವಿಜಾಪುರ

ಬಾಗಲಕೋಟೆಯಲ್ಲಿ ಕಳೆದ ೨೮ನೇ ತಾರೀಕು ಅಕ್ಕಮಹಾದೇವಿ ಕಟ್ಟಡದ ಅಡಿಗಲ್ಲು ಕೂಡಿಸುವ ಸಮಾರಂಭ ಶ್ರೀಮಂತ ವಾರದ ಮಲ್ಲಪ್ಪನವರ ಪತ್ನಿ ಗೌರಮ್ಮನವರ ಹಸ್ತದಿಂದ ಜರುಗಿತು ಶಿವಯೋಗಮಂದಿರದ ಶ್ರೀ ಹಾನಗಲ್ಲ ಸ್ವಾಮಿಗಳು ಉಪಸ್ಥಿತರಾಗಿದ್ದರು. ಶಿರಗುಪ್ಪಿಯ ದೇಸಾಯಿಣಿಯರು ಕಟ್ಟಡಕ್ಕೆ ೧೧೧೧ ರೂ. ಶ್ರೀ ಗೌರಮ್ಮನವರು ೧೦೦೧ ರೂಪಾಯಿ ಕಾಣಿಕೆ ಕೊಡುವ ವಾಗ್ದಾನ ಮಾಡಿದರು.

## ಬಳ್ಳಾರಿ

ಬಳ್ಳಾರಿ ಜಿಲ್ಹಾ ಕರ್ನಾಟಕ ಸಂಘದ ಆಶ್ರಯದಲ್ಲಿ ಶ್ರೀ ಎನ್ ಆರ್ ಗಂಗಾವತಿಯವರ ಅಧ್ಯಕ್ಷತೆಯಲ್ಲಿ ಹೊಸ ಕರ್ನಾಟಕ ದಿನವಾಚರಿಸಲ್ಪಟ್ಟಿತು. ಕರ್ನಾಟಕ ಪ್ರಾಂತ ನಿರ್ಮಾಣದ ಪೂರ್ವ ಗಡಿ ನಿರ್ಣಯ ಸಮಿತಿಯನ್ನು ಸ್ಥಾಪಿಸಬೇಕೆಂದು ನಿರ್ಣಯಗಳಾದುವು.

ಆದವಾನಿಯಲ್ಲಿ ಹೊಸ ಕರ್ನಾಟಕ ದಿನಾಚರಣೆ ಮಾಡಲಾಯಿತು. ಬೊಳ್ಳೊಳ್ಳಿ ನಾಗಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿತ್ತು.

ಬದನೇಹಾಳಿನಲ್ಲಿ ಕರ್ನಾಟಕ ಏಕೀಕರಣ ಸಂಘದ ಪರವಾಗಿ ೧ ನೇ ತಾರೀಕಿನಿಂದ ೭ ರವರೆಗೆ ವಿವಿಧ ವಿಷಯಗಳ ಮೇಲೆ ಉಪನ್ಯಾಸಗಳಾದುವು.

ಪಾನನಿರೋಧ ಚಳವಳಿಯ ಸಂಬಂಧದಲ್ಲಿ ಮದ್ರಾಸ ಸರಕಾರದವರು ಹೊಸಪೇಟೆಯಲ್ಲಿ ಗ್ರಾಮೋದ್ಧಾರ ಶಾಲೆಯನ್ನು ಪ್ರಾರಂಭಿಸಿದ್ದಾರೆ. ಶ್ರೀ ಬೂದೀಹಾಳ ಅನಂತಾಚಾರ್ಯರು ಶಾಲೆಯ ಉದ್ಘಾಟನ ಮಾಡಿದರು. ಗ್ರಾಮೋದ್ಧಾರ ಕಾರ್ಯಕ್ಕಾಗಿ ಕಾರ್ಯಕರ್ತರಿಗೆ ಶಿಕ್ಷಣ ಕೊಡುವದೇ ಈ ಶಾಲೆಯ ಮುಖ್ಯ ಉದ್ದೇಶ. ಈ ಶಿಕ್ಷಣ ಪಡೆಯಲು ೨೬ ಜನ ಬೇರೆ ಬೇರೆ ಭಾಗಗಳಿಂದ ಬಂದಿರುವರು.

ಹೊಸಪೇಟೆಯ ನಾನ್‌ಗಜೆಟೆಡ್ ಉದ್ಯೋಗಸ್ಥರ ಸಂಘದ ಆಶ್ರಯದಲ್ಲಿ ಸಭೆ ಸೇರಿ ಮದ್ರಾಸ ಸರಕಾರದವರು ಕೊಡಬೇಕೆಂದಿರುವ ನಡುಗಾಲ ಪರಿಹಾರದ ಯೋಜನೆ ಅತೃಪ್ತಿಕರವಾಗಿದೆಂದು ಸರಕಾರದವರಿಗೆ ತಿಳಿಸುತ್ತ ಕನಿಷ್ಠ ತಿಂಗಳಿಗೆ ೭೫ ಕ್ಕಿಂತ ಕಡಮೆ ಆಗದಷ್ಟು ಸಂಬಳ ಸಿಕ್ಕುವಂತೆ ಮಾಡಬೇಕೆಂದು ವಿನಂತಿ ಮಾಡಿಕೊಳ್ಳಲಾಯಿತು.

## ಉತ್ತರ ಕನ್ನಡ

ಕುಮಟಾ ಸೀದಾ ಅಂಗಡಿಗಳಲ್ಲಿ ಕಳೆದ ತಿಂಗಳ ಒಮ್ಮೆ ಒಂದು ವಾರದ ಹತ್ತೀಕಾಳು ಸಿಕ್ಕಿತ್ತು. ಈಗ ಮತ್ತೆ ಹತ್ತೀಕಾಳು ಸಿಕ್ಕುವದಿಲ್ಲ ದನಗಳನ್ನು ಸಾಕುವವರಿಗೆ ಬಳ್ಳಿ ತೊಂದರೆಯುಂಟಾಗಿದೆ.

ನಾಡುಮಾಸ್ಕೇರಿಯ ಕಾಂಗ್ರೆಸ್ ಕಾರ್ಯಕರ್ತರು ಸೆರೆ ಮತ್ತು ಸೆರೆ ಕಳ್ಳರನ್ನು ಹಿಡಿದು ಕೊಡುವಲ್ಲಿ ನಿರತರಾಗಿದ್ದಾರೆ. ಇವರು ಕಳ್ಳಪೇಟೆಯ ವ್ಯಾಪಾರಿಗಳನ್ನೂ ಹಿಡಿದುಕೊಟ್ಟರೆ ಒಳಿತಾಗುವದೆಂದು ಓರ್ವರು ಸೂಚಿಸುತ್ತಾರೆ. ಗಂಗಾವಳಿಯಲ್ಲಿಯ ಮಚವೆಗಳ ಮುಖಾಂತರ ಅಕ್ಕಿ ಹೊರಗೆ ಹೋಗುತ್ತದೆಂಬ ಕೂಗು ಎಂದಿನಿಂದಲೂ ಇದೆ. ಇದನ್ನು ಶೋಧಿಸಿದರೆ ಕಾಂಗ್ರೆಸ್ಸಿಗರು ಅತ್ಯುಪಯುಕ್ತ ಕೆಲಸ ಮಾಡಿದಂತಾಗುತ್ತದೆಂದು ಅವರ ಅಭಿಪ್ರಾಯ.

ಕಾರವಾರದಲ್ಲಿ ೨೯ ನೇ ತಾರೀಕು ಹುಡಿಗೆಯರ ಶಾಲೆಯ ಪಾರಿತೋಷಕ ಸಮಾರಂಭ ಜರುಗಿತು. ರಾ. ಬ. ಚಂದಾವರಕರರು ಅಧ್ಯಕ್ಷತೆ ವಹಿಸಿದ್ದರು. ಹುಡುಗೆಯರ ಶಿಕ್ಷಣದ ಏರ್ಪಾಟು ಬೇರೆಯಾಗಬೇಕೆಂದೂ ಅವರು ಒಳ್ಳೆ ತಾಯಂದಿರೂ ಗೃಹಿಣಿಯರೂ ಆಗಬೇಕೆಂದು ಕೆಲವರು ಅಭಿಪ್ರಾಯಪಟ್ಟರು.

ಕಾಳೀ ನದಿಯಿಂದ ವಿದ್ಯುಚ್ಛಕ್ತಿಯ ಉತ್ಪಾದನೆಮಾಡದೆ ಸಿದ್ದಾಪುರ ತಾಲೂಕಿನ ಉಂಚಳ್ಳಿ ಧಬಧಬೆಯ ಸಹಾಯದಿಂದ ವಿದ್ಯುತ್ತನ್ನು ತಯಾರಿಸುವ ವ್ಯವಸ್ಥೆ ಮಾಡಿದರೆ ಒಳಿತಾಗುವದೆಂದೂ ಈ ಧಬಧಬೆಯ ನೀರು ೭೦೦೬ ಅಡಿ ಮೇಲಿಂದ ಬೀಳುತಿರುವದರಿಂದ ಹೆಚ್ಚಿನ ವಿದ್ಯುತ್ತನ್ನು ಉತ್ಪಾದಿಸಲು ಅನುಕೂಲವಾಗುವದೆಂದೂ ಶ್ರೀ ಅಯ್ಯಾಜಿ ಶಿವಲಿಂಗಯ್ಯ ಮುಟ್ಟಳ್ಳಿ ಇವರು ತಿಳಿಸುತ್ತಾರೆ.

## ಕನ್ನಡ ಸಂಸ್ಥಾನ

ಅರಕಲಗೂಡ ನಗರಸಭೆ ಚುನಾವಣೆಯಲ್ಲಿ ೪ ನೇ ಮತದಾರ ಸಂಘದಿಂದ ಶೀಲಗಾರ ದೊಡ್ಡಯ್ಯ, ರಾಮದಾಸಯ್ಯ, ಚಿಕ್ಕಲದೊಡ್ಡಮ್ಮ ಮತ್ತು ದೇವುಗಾ ಎಂಬ ನಾಲ್ವರು ಹರಿಜನರು ಮೂವರು ಸವರ್ಣ ಹಿಂದುಗಳನ್ನು ಒಬ್ಬ ಮುಸಲ್ಮಾನನನ್ನು ಸೋಲಿಸಿ ಆರಿಸಿ ಬಂದಿದ್ದರು. ಮೈಸೂರು ಸಂಸ್ಥಾನದಲ್ಲಿ ಸವರ್ಣ ಹಿಂದುಗಳನ್ನು ಸೋಲಿಸಿ ಹರಿಜನರು ಆರಿಸಿ ಬಂದುದು ಇದು ಮೊದಲನೆಯ ಸಲ. ಅವರ ಸನ್ಮಾನಾರ್ಥ ಸೇರಿದ ಸಭೆಯಲ್ಲಿ ಹರಿಜನ ಧುರೀಣ ಗೋವಿಂದದಾಸರು ಮಾತಾಡುತ್ತ ಹರಿಜನರಿಗೆ ಭಿನ್ನ ಮತದಾರ ಸಂಘಗಳು ಬೇಕಾಗಿಲ್ಲೆಂಬುದಕ್ಕೆ ಇದೊಂದೇ ಉದಾಹರಣ ಸಾಕೆಂದು ಹೇಳಿ ಮಹಾತ್ಮರಲ್ಲಿ ವಿಶ್ವಾಸವಿಟ್ಟು ಹರಿಜನರು ಮುನ್ನಡೆ ಇಡಬೇಕೆಂದು ಬಿನ್ನವಿಸಿಕೊಂಡರು.

ಡಿಸೆಂಬರ ೨೫ ಕ್ಕೆ ನಡೆಯುವ ಮಿರಜ ಸಂಸ್ಥಾನ ಪ್ರಜಾ ಪರಿಷತ್ತಿನ ೧೦ ನೇ ಅಧಿವೇಶನದ ಅಧ್ಯಕ್ಷತೆ ವಹಿಸಲು ಶ್ರೀ ಅಚ್ಯುತ ಪಟವರ್ಧನರು ಒಪ್ಪಿರುವರು. ಶ್ರೀ ನಾನಾ ಪಾಟೀಲರು ಅದರ ಉದ್ಘಾಟನ ಮಾಡುವರು.

## ಮುಂಬಯಿ

ಮುಂಬಯಿಯಲ್ಲಿ ಬ್ರಿಟಿಶ್ ಸೈನಿಕರ ಕಡೆಯಿಂದ ಬಂದೂಕುಗಳನ್ನು ಕೊಳ್ಳಲು ಯತ್ನಿಸುತ್ತಿದ್ದ ಮೂವರನ್ನು ಪೋಲೀಸರು ೮ ನೇ ತಾರೀಕು ಒಂದು ಚಿತ್ರಮಂದಿರದ ಹಿಂದೆ ಸೆರೆಹಿಡಿದರು. ಈ ಮೂವರು ಪುಂಡರ ತಂಡಕ್ಕೆ ಸೇರಿದವರೆಂದೂ ಈ ತಂಡು ಕ್ರಾಂತಿಕಾರರ ಪಡೆಯನ್ನು ತಯಾರಿಸುವ ಎಲ್ಲ ಯೋಜನೆ ಸಿದ್ಧಪಡಿಸಿದೆಂದೂ ತಿಳಿಯುತ್ತದೆ. ಇದು ಯಾವದಾದರೊಂದು ರಾಜಕೀಯ ಪಕ್ಷದ ಕೂಸೋ ಶುದ್ಧ ಕಳ್ಳರ ಗುಂಪೋ ತಿಳಿದಿಲ್ಲ.

ಸಾರ್ವಜನಿಕರ ಆರೋಗ್ಯ ರಕ್ಷಣೆಗಾಗಿ ಪ್ರತಿಬಂಧಕ ಉಪಾಯಗಳಿಗೆ ಮುಂಬಯಿ ಸರಕಾರ ಹೆಚ್ಚು ಹಣ ವೆಚ್ಚಮಾಡುವದು ಎಂದು ಆರೋಗ್ಯ ಮಂತ್ರಿ ಡಾ. ಎಂ.ಡಿ.ಡಿ.ಗಿಲ್ಡರರು ಮುಂಬಯಿಯಲ್ಲಿ ನಾಲ್ಕನೆ ವೈದ್ಯಕ ಕಾಂಗ್ರೆಸ್ಸಿನ ಉದ್ಘಾಟನೆ ಮಾಡುತ್ತ ಹೇಳಿದರು. ಹಳ್ಳಿಗಳಲ್ಲಿಯ ಅಸ್ವಚ್ಛತೆ, ಕುಡಿಯುವ ನೀರಿನ ಅಭಾವ, ಪೌಷ್ಟಿಕ ಅನ್ನವಿಲ್ಲದಿರುವದು ಮುಂತಾದವುಗಳ ಮೂಲಕ ಪಿಡುಗುಗಳು ಹೆಚ್ಚುತಿರುವದರಿಂದ ಸರಕಾರದವರು ಇವುಗಳ ನಿವಾರಣೆಗಾಗಿ ಪ್ರಯತ್ನಿಸುತಿರುವರೆಂದು ಅವರು ಹೇಳಿದರು.

ಅಲ್ಪಸಂಖ್ಯಾಕ ಪಕ್ಷವು ಬಹುಸಂಖ್ಯಾಕ ಪಕ್ಷದವರ ಪ್ರಗತಿಯನ್ನು ತಡೆಗಟ್ಟಲಾರದೆಂದು ಆ್ಯಟ್ಲಿಯವರು ಕಳೆದ ಮಾರ್ಚ ತಿಂಗಳಲ್ಲಿ ಕೊಟ್ಟ ಆಶ್ವಾಸನವನ್ನು ಈಗ ಈ ಪ್ರಕಟನೆಯಿಂದ ಮುರಿದಿದ್ದಾರೆ. ಆದರೆ ಈ ಪ್ರಕಟನೆಯೇನು ಅನಿರೀಕ್ಷಿತವಲ್ಲ ಎಂದು ಮುಂತಾಗಿ ಅಚ್ಯುತ ಪಟವರ್ಧನರು ಅಭಿಪ್ರಾಯ ಪಟ್ಟಿದ್ದಾರೆ.

'ಹಿಂದೂ ವ್ಯಾಪಾರಸ್ಥರು ಮುಸಲ್ಮಾನ ವ್ಯಾಪಾರಸ್ಥರ ಮೇಲೆ ಆರ್ಥಿಕ ಬಹಿಷ್ಕಾರ ಹಾಕುತಿದ್ದಾರೆ ಎಂಬುದನ್ನು ಕೇಳಿ ನನಗೆ ಆಶ್ಚರ್ಯವಾಗುತ್ತದೆ. ಇದು ನಿಜವಾಗಿದ್ದರೆ ಇದರ ಕಡೆಗೆ ನಾವು ಲಕ್ಷ್ಯ ಕೊಡಬೇಕಾಗುವದು. ಬಹಿಷ್ಕಾರ ಧೋರಣೆ ಅಖಂಡ ಹಿಂದುಸ್ತಾನ ತತ್ವಕ್ಕೆ ಸರಿ ಹೋಗುವದಿಲ್ಲ. ಹಿಂದು ಮುಸಲ್ಮಾನರ ಸಮ್ಮಿಶ್ರ ಸರಕಾರ ಇಂಥ ಧೋರಣವನ್ನು ಸಹಿಸಲಾರದು. ಅದು ಕಾರ್ಯರೂಪಕ್ಕೆ ಇಳಿಯದಂತೆ ಅದು ಪ್ರಯತ್ನಿಸುವದು' ಎಂದು ಮುಂತಾಗಿ ನಡುಗಾಲ ಸರಕಾರದ ವಾಣಿಜ್ಯ ಮಂತ್ರಿ ಚುಂದ್ರಿಗಾರರು ಮುಂಬಯಿಯ ಮುಸಲ್ಮಾನ ವಣಿಕ್ ಸಂಘದ ಸಭೆಯಲ್ಲಿ ಹೇಳಿದರು.

ಡಿಸೆಂಬರ ೧ ರಿಂದ ಮುಂಬಯಿ ಸರಕಾರ ಸಣ್ಣ ಧಾನ್ಯಗಳ ಬೆಲೆಯ ಬಗ್ಗೆ ಸಹಾಯ ಧನ ಕೊಡುವದಿಲ್ಲ ಎಂದು ಪುಣೆಯ ಕಲೆಕ್ಟರ ಶ್ರೀ ಬೆಹೆಜಿಯಾ ಇವರ ಹೇಳಿಕೆಯ ಮೇಲಿಂದ ಗೊತ್ತಾಗುವದು. ಇದರಿಂದ ಜೋಳ, ಸಜ್ಜಿ, ಮತ್ತು ಗೋವಿನಜೋಳದ 'ಬೆಲೆ' ಏರಬಹುದೆಂದು ಗೊತ್ತಾಗುತ್ತದೆ.

ಗೋವೆಯ ರಾಷ್ಟ್ರೀಯ ಸಭೆಯ ಅಧ್ಯಕ್ಷ ಡಾ. ಹೆಡಗೆ ಇವರಿಗೆ ೮ ವರ್ಷಗಳ ಕರೆನೀರಿನ ಶಿಕ್ಷೆ ಮತ್ತು ೧೫ ವರ್ಷಗಳ ರಾಜಕೀಯ ಹಕ್ಕು ರದ್ದಿಯ ಶಿಕ್ಷೆ ವಿಧಿಸಲಾಯಿತು. ಸೈನ್ಯ ಕೋರ್ಟಿನಲ್ಲಿ ಇವರ ವಿಚಾರಣೆ ನಡೆಯಿತು.

## ಮದ್ರಾಸ

ಮದ್ರಾಸ ಪ್ರಾಂತದಲ್ಲಿ ಅತಿವೃಷ್ಟಿಯಾಗಿ ಬಹಳ ತೊಂದರೆಯುಂಟಾಗಿದೆ. ರೇಲ್ವೆ ಮಾರ್ಗಗಳು ಕೂಡ ಕಟ್ಟಾಗಿದ್ದವು. ಮದ್ರಾಸ ನಗರದಲ್ಲಿ ಕಳೆದ ವಾರ ೨೦ ಇಂಚು ಮಳೆಯಾಗಿದೆ. ನದಿಗಳಿಗೆ ಮಹಾಪೂರು ಬಂದು ಅನೇಕರು ಮನೆಮಾರುಗಳನ್ನು ಕಳೆದುಕೊಂಡಿರುವರು. ನಗರದಲ್ಲಿಯೆ ೧೨೦ ಸಾವಿರ ಜನ ನಿರಾಶ್ರಿತರಾಗಿದ್ದಾರೆ. ಅವರಿಗೆ ಆಹಾರ ಮೊದಲಾದ ಪರಿಹಾರವನ್ನು ಕೊಡುತಿರುವರು. ಈ ರೀತಿ ಜನತೆಗೆ ವಿಶೇಷ ತೊಂದರೆಯಾಗಿದ್ದರೂ ಒಟ್ಟಾರೆ ಪ್ರಾಂತದ ಆಹಾರ ಪರಿಸ್ಥಿತಿಗೆ ಅಷ್ಟೇನು ಧಕ್ಕೆಯಾಗಿಲ್ಲೆಂದು ತಿಳಿಯುತ್ತದೆ.

ನೆಲ್ಲೂರ ಜಿಲ್ಹೆಯ ತಿಮ್ಮೂರು, ನರಸಿಂಗರಾವ ಪೇಟೆ ಮತ್ತು ಚಿಮ್ಮೂರು ಹಳ್ಳಿಗಳ ನಿರಾಶ್ರಿತರ ಪರಿಹಾರಕ್ಕಾಗಿ ಮದ್ರಾಸ ಸರಕಾರದವರು ೨ ಸಾವಿರ ರೂ. ಮಂಜೂರ ಮಾಡಿದ್ದಾರೆ.

# ಹಿಂದುಸ್ತಾನ

ಮದ್ರಾಸ ಸರಕಾರದವರ ಜವಳಿ ಧೋರಣೆಗೆ ಅ. ಭಾ. ಗ್ರಾಮೋದ್ಯೋಗ ಸಂಘದ ಕಾರ್ಯದರ್ಶಿ ಪ್ರೊ. ಕುಮಾರಪ್ಪ ಇವರು ಬೆಂಬಲ ಕೊಟ್ಟಿದ್ದಾರೆ.

ಮಧ್ಯಪ್ರಾಂತದಲ್ಲಿ ಪ್ರತಿಯೊಬ್ಬನಿಗೆ ವರ್ಷಕ್ಕೆ ಆರು ಗಜ ಬಟ್ಟೆ ಸಿಗದಾ ಇರುವಾಗ ಮದ್ರಾಸಿನಲ್ಲಿ ಐದು ಗಜ ದೊರೆತರೆ ಅಷ್ಟೇನು ಕಡಮೆಯಾಗದೆಂದು ಅವರು ಎಂದರು.

ಕೇರಳದ ಕಮ್ಯುನಿಷ್ಟ ಪಕ್ಷದ ಕಾರ್ಯದರ್ಶಿ ಎ. ಕೆ. ಗೋಪಾಲನ್‌ರು ಸಿಂಹಳ ಪ್ರವಾಸ ಮುಗಿಸಿಕೊಂಡು ಕಾಲಿಕತ್ತಿಗೆ ಮರಳಿದ ಕೂಡಲೆ ಪೋಲೀಸರು ಅವರನ್ನು ಬಂಧಿಸಿದರು. ಹೊಸ ದುರ್ಗ ಪೋಲೀಸರು ಇವರ ಮೇಲೆ ಖಟ್ಲೆ ಹಾಕಿದ್ದಾರೆ. ಇದರ ನಿಷೇಧಾರ್ಥ ಕಮ್ಯುನಿಸ್ಟರು ನಗರದಲ್ಲಿ ಮೆರವಣಿಗೆ ಹೊರಡಿಸಿದ್ದರು.

ಅಗಸ್ಟ ೧೯೪೨ರಲ್ಲಿ ಕೊಯಿಮತ್ತೂರ ವಿಮಾನಗೃಹ ಕೊಳ್ಳಿ ಖಟ್ಲೆಯಲ್ಲಿ ೧೦ ವರ್ಷ ಶಿಕ್ಷೆ ವಿಧಿಸಲ್ಪಟ್ಟ ಉದಮಲಪೇಟೆಯ ಎಸ್. ಗೋಮರಿನಾಯಗಂ ಪಿಳ್ಳೆಯವರನ್ನು ಪ್ರಾಂತಿಕ ಸರಕಾರದವರು ಬಂಧಮುಕ್ತ ಮಾಡಿರುವರು.

ಮದ್ರಾಸ ಸರಕಾರದವರು ರಾಷ್ಟ್ರೀಕರಣದ ಪ್ರಶ್ನೆಯ ವಿಚಾರಕ್ಕಾಗಿ ಸಾರಿಗೆ ಮಂತ್ರಿಗಳಾದ ರಾಘವ ಮೆನನ್‌ರ ಅಧ್ಯಕ್ಷತೆಯಲ್ಲಿ ವಿ. ವಿ. ಗಿರಿ, ಕೆ. ಆರ್. ಕಾರಂತ, ಕೆ. ಭಾಷ್ಯಂ, ಡ್ಯಾನಿಯಲ್ ಥಾಮಸ್, ಕೆ. ಕೋಟಿರಡ್ಡಿ ಈ ಮಂತ್ರಿಗಳ ಸಮಿತಿಯೊಂದನ್ನು ನೇಮಿಸಿದ್ದಾರೆ.

## ಹೊಸದಿಲ್ಲಿ

ಪಂಡಿತ ಜವಾಹರಲಾಲರು ಸಂಯುಕ್ತರಾಷ್ಟ್ರ ಸಂಸ್ಥೆಯ ಭಾರತ ಪ್ರತಿನಿಧಿ ಮಂಡಳದ ಧುರೀಣರಿಗೆ ಸಂದೇಶ ಕಳಿಸಿ ಅವರ ಕಾರ್ಯಕ್ಕಾಗಿ ಅಭಿನಂದಿಸಿದ್ದಾರೆ.

ಮದ್ರಾಸದ ಮುಖ್ಯ ಮಂತ್ರಿಗಳಾದ ಶ್ರೀ ಟ. ಪ್ರಕಾಶಂರು ಜವಳಿ ಧೋರಣದ ಸಂಬಂಧದಲ್ಲಿ ಹಿಂದುಸ್ತಾನ ಸರಕಾರದ ಮಂತ್ರಿಗಳೊಡನೆ ವಿಚಾರವಿನಿಮಯ ಮಾಡಲಿರುವರೆಂದು ತಿಳಿಯುತ್ತದೆ. ಕೈಮಗ್ಗದ ಕೂಲಿಕಾರರಿಗಾಗಿ ಹೆಚ್ಚು ನೂಲು ಕಾಯ್ದಿಡಲು ಅವರು ಹಿಂದುಸ್ತಾನ ಸರಕಾರಕ್ಕೆ ಬಿನ್ನವಿಸಿಕೊಳ್ಳಲಿರುವರೆಂದು ತಿಳಿಯುತ್ತದೆ.

ಬ್ರಿಟಿಶ ಸರಕಾರದವರು ೬ ನೇ ತಾರೀಕು ಹೊರಡಿಸಿದ ಪ್ರಕಟನೆಯನ್ನು ಟೀಕಿಸುತ್ತ ಸರ್ ಸಿ. ಪಿ. ರಾಮಸ್ವಾಮಿಯವರು ಅದರಲ್ಲಿ ಪಾಕಿಸ್ತಾನದ ಸ್ವರೂಪ ವಿವರಣೆಯಿಲ್ಲದಿದ್ದರೂ ಅದರ ಸಾರವಿದೆಂದು ಅಭಿಪ್ರಾಯ ಪಟ್ಟಿದ್ದಾರೆ. ಪ್ರತಿಯೊಂದು ವಿಷಯದ ವಿವರಣೆಗಾಗಿ ಸಂಯುಕ್ತ ನ್ಯಾಯಾಲಯಕ್ಕೆ ಹೋಗುವದೆಂದರೆ ಅಸೆಂಬ್ಲಿಯ ಮತ್ತು ಅಧ್ಯಕ್ಷರ ಕಾರ್ಯಕ್ಕೆ ವ್ಯತ್ಯಯವುಂಟಾಗುವದೆಂದೂ ಅವರ ಅಭಿಪ್ರಾಯ. ಇಂಥ ನಿರ್ಬಂಧಗಳಲ್ಲಿ ಘಟನೆಯನ್ನು ಸಿದ್ಧಪಡಿಸಬೇಕೋ ಇಲ್ಲವೆ ಫ್ರಾನ್ಸದಲ್ಲಿ ಟೆನಿಸ್ ಕೋರ್ಟ ಘಟನೆ ಸಿದ್ಧವಾದಂತೆ ಇಲ್ಲಿಯೂ ಪ್ರತ್ಯೇಕ ಘಟನೆ ಮಾಡುವದು ಚಿತವಾಗಿದೆಯೊ ಎಂಬುದು ವಿಚಾರ ಮಾಡತಕ್ಕ ಪ್ರಶ್ನೆ ಎಂದು ಅವರ ಅಭಿಪ್ರಾಯ.

ಸರ್ ಸ್ಟಾಫರ್ಡ ಕ್ರಿಪ್ಸರ ಪತ್ನಿ ಲೇಡಿ ಕ್ರಿಪ್ಸರ್ರು ಚೀನದಿಂದ ಮಗಳೊಡನೆ ಹಿಂದುಸ್ತಾನಕ್ಕೆ ಬಂದಿದ್ದು ದಿಲ್ಲಿಯಲ್ಲಿ ಒಂದು ವಾರ ಉಳಿಯುವರು. ಪಂಡಿತ ಜವಾಹರಲಾಲರ ಅತಿಥಿಗಳಾಗಿರುವರು ಅವರು.

ಮುಂದಿನ ವರ್ಷ ಅಸ್ಟ್ರೇಲಿಯಕ್ಕೆ ಹೋಗಲಿದ್ದ ಹಿಂದಿ ಕ್ರಿಕೆಟ ಟೀಮಿಗೆ ಶ್ರೀ ವಿ. ಎಂ. ಮರ್ಚಂಟರು ಕಪ್ತಾನರಾಗಿ ಆರಿಸಲ್ಪಟ್ಟಿದ್ದಾರೆ.

ಜಗತ್ತಿನ ಯಾವ ಭಾಗದಲ್ಲಿ ಯಾವ ಸಮಯದಲ್ಲಿ ಬೇಕೋ ಅಗ ಆಹಾರ ಪದಾರ್ಥಗಳನ್ನು ಪೂರೈಸುವ ಹೊಸ ಆಹಾರ ಯೋಜನೆಯು ಸಂಯುಕ್ತರಾಷ್ಟ್ರಗಳ ಆರ್ಥಿಕ ಮತ್ತು ಹಣಕಾಸಿನ ಸಮಿತಿಯ ಸಭೆಯಲ್ಲಿ ಬರಲಿದೆ.

ಸರ್. ಸಿ. ಪಿ. ರಾಮಸ್ವಾಮಿಯವರು ತಿರುವಾಂಕೂರ ಸಂಸ್ಥಾನದ ದಿವಾಣ ಸ್ಥಳಕ್ಕೆ ರಾಜೀನಾಮೆ ಕೊಟ್ಟಿರುವರು. ಇನ್ನು ಮುಂದೆ ಅವರು ಉದಕಮಂಡಲದಲ್ಲಿದ್ದುಕೊಂಡು ಭಾರತೀಯ ಸಂಸ್ಕೃತಿ, ಇತಿಹಾಸ ಮುಂತಾದ್ದರಬಗ್ಗೆ ಪುಸ್ತಕಗಳನ್ನು ಬರೆಯಲಿರುವರೆಂದು ತಿಳಿಯುತ್ತದೆ. ಅವರು ಬಿಟ್ಟುಹೋದರೂ ತಿರುವಾಂಕೂರಿನ ಘಟನೆಯಲ್ಲಿ ಅಥವಾ ಔದ್ಯೋಗಿಕ ಮತ್ತು ಶೈಕ್ಷಣಿಕ ಧೋರಣೆಯಲ್ಲಿ ಹೆಚ್ಚು ಕಡಿಮೆಯಾಗುವದಿಲ್ಲೆಂದು ಅಧಿಕೃತವಾಗಿ ತಿಳಿಯುತ್ತದೆ.

ಭಾರತ ಕ್ರಿಕೆಟ ಸಂಘ ಮತ್ತು ಇತರರಲ್ಲಿ ನಡೆದ ಕ್ರಿಕೆಟ ಪಂದ್ಯಾಟದಲ್ಲಿ ಇತರರು ಆರು ಹುದ್ದರಿಗಳಿಂದ ಪಂದ್ಯಾಟವನ್ನು ಗೆದ್ದರು. ಭಾರತ ಸಂಘ ಮೊದಲನೆ ಆಟ ೧೭೭ ಓಟಗಳು ಎರಡನೆ ಆಟ ೧೫೫ ಓಟಗಳು. ಇತರರು ಮೊದಲನೆ ಆಟ ೨೦೭ ಓಟಗಳು ಎರಡನೆ ಆಟ ೪ ಹುದ್ದರಿಗಳಿಗೆ ೧೨೮ ಓಟಗಳು.

ಬ್ಯಾ. ಜಿನ್ನಾರವರು ಹಿಂದುಸ್ತಾನಕ್ಕಾಗಿ ೧೫ ನೇ ತಾರೀಕು ಲಂಡನ ಬಿಡುವರು. ಅದಕ್ಕೂ ಮೊದಲು ಅವರು ಶನಿವಾರ ಪತ್ರಿಕಾ ಪರಿಷತ್ತು ಕೂಡಿಸುವರು ಎಂದು ಅವರ ಖಾಸಗಿ ಕಾರ್ಯದರ್ಶಿಗಳು ತಿಳಿಸುತ್ತಾರೆ.

## ಬಂಗಾಲ

ಪಂಡಿತ ಜವಾಹರಲಾಲರು ಕಲಕತ್ತೆಯ ಅಸೋಸಿಯೇಟೆಡ್ ಕಾಮರ್ಸ ಚೆಂಬರದವರ ಸಭೆಗಾಗಿ ೧೬ ನೇ ತಾರೀಕಿಗೆ ಹೋದಾಗ ನವಖಾಲಿ ಭಾಗಕ್ಕೆ ಹೋಗಿ ಮಹಾತ್ಮಾ ಗಾಂಧಿಯವರನ್ನು ಭೆಟ್ಟಿಯಾಗಿ ಇತ್ತೀಚಿನ ರಾಜಕೀಯ ಪರಿಸ್ಥಿತಿ ಬಗ್ಗೆ ವಿಚಾರವಿನಿಮಯ ಮಾಡುವರೆಂದು ತಿಳಿಯುತ್ತದೆ.

ಕಲಕತ್ತೆಯಲ್ಲಿ ಇದೇ ೧೪ ರಿಂದ ಕರ್ಫ್ಯೂ ಹುಕುಮನ್ನು ಹಿಂತೆಗೆದುಕೊಳ್ಳಲಾಗುವದು ಆಗಸ್ಟದಿಂದ ಇದು ಜಾರಿಯಲ್ಲಿದ್ದಿತು.

ಕಲಕತ್ತೆಯ ಹಿಂದೀ ಲೋಕಮಾನ್ಯ ಪತ್ರಿಕೆಯ ಸಂಪಾದಕ ಮುದ್ರಕ ಮತ್ತು ಮುದ್ರಣಾಲಯದ ಒಡೆಯರಿಂದ ಎರಡೆರಡು ಸಾವಿರ ರೂಪಾಯಿ ಜಾಮೀನನ್ನು ಬಂಗಾಲ ಸರಕಾರದವರು ಕೇಳಿದ್ದಾರೆ.

ಕಲಕತ್ತೆಯ ಜಯಹಿಂದ ಸಂಪಾದಕರು ಆಕ್ಟೋಬರ ೨೮ ನೇ ತಾರೀಕಿನ ಸಂಚಿಕೆಯಲ್ಲಿ ಕೊಳ್ಳಿ ಹಾಗು ಇರಿತಗಳ ಹಾವಳಿ ಎಂಬ ಲೇಖ ಬರೆದರೆಂದು ಬಂಗಾಲ ಸರಕಾರದ ವಿಶೇಷ ಆರ್ಡಿನನ್ಸಿನನ್ವಯ ಸಂಪಾದಕ ಮನೋರಂಜನ ಭಟ್ಟಾಚಾರ್ಯರ ಮೇಲೆ ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರು ಸಮನ್ಸ ಹೊರಡಿಸಿದ್ದಾರೆ.

೬ ನೇ ತಾರೀಕು ಡಾಕಾದಲ್ಲಿ ಮೂವರು ಗಾಯಗೊಂಡಿದ್ದು ನಾವೆಯ ಮೇಲೆ ಪುಂಡರು ದಾಳಿ ಮಾಡಿದ್ದರಿಂದ ಅದರಲ್ಲಿಯ ಇಬ್ಬರು ಕಾಣೆಯಾಗಿದ್ದಾರೆ. ಇದರಂತೆ ಬುರಿ ಗಂಗಾ ಆಚೆಯ ಹಳ್ಳಿಗೆ ಗುರುವಾರ ಹೋಗಿದ್ದ ಡಾಕ್ಟರರು ಕಾಣೆಯಾಗಿರುವರು.

## ಬಿಹಾರ

ಬಿಹಾರ ದೊಂಬಿಯ ಸಂಬಂಧದಲ್ಲಿ ಪ್ರಾಂತಿಕ ಕಾಂಗ್ರೆಸ ಕಮೀಟಿಯವರು ಒಂದು ವರದಿಯನ್ನು ಪ್ರಸಿದ್ಧಿಸಲಿರುವರು. ನಿಜವೃತ್ತಗಳನ್ನೆ ಕಳಿಸಬೇಕೆಂದು ಆಯಾ ಕಾಂಗ್ರೆಸ ಕಮೀಟಿಗಳಿಗೆ ಬರೆಯಲಾಗಿದೆ.

ನಿರಾಶ್ರಿತರಿಗೆ ಯೋಗ್ಯ ಪರಿಹಾರ ಕೊಡಲಾಗುವದು. ಅವರು ತಮ್ಮ ತಮ್ಮ ಸ್ಥಳಗಳಿಗೆ ಮರಳಬೇಕು ಎಂದು ಮುಂತಾಗಿ ಬಿಹಾರ ಸರಕಾರದವರು ಪ್ರಸಿದ್ಧಿಸಿದ್ದಾರೆ.

## ಮಧ್ಯಪ್ರಾಂತ

ಅಖಿಲ ಭಾರತ ಅಂಚೆ ಪರಿಷತ್ತಿನ ೨೧ನೇ ಅಧಿವೇಶನ ಅಕೋಲೆಯಲ್ಲಿ ಇದೆ ೨೪ ರಿಂದ ೨೬ರವರೆಗೆ ಮೃಣಾಲಕಾಂತಿ ಬೋಸರ ಅಧ್ಯಕ್ಷತೆಯಲ್ಲಿ ಜರಗುವದು. ಕಳೆದ ಅಂಚೆ ಸಂಪಿನಿಂದ ಉದ್ಭೂತವಾದ ಪರಿಸ್ಥಿತಿ ಹಾಗು ಯುನಿಯನ್‌ದ ಬಲಸಂಘಟನೆ ಮೊದಲಾದವುಗಳು ಪರಿಷತ್ತಿನಲ್ಲಿ ಚರ್ಚಿಸಲ್ಪಡುವವು.

## ಸಂಯುಕ್ತಪ್ರಾಂತ

ಬಾಲಿಯಾದ ವೀರರೆಂದು ಹೆಸರುಪಡೆದ ಚಿತ್ತು ಪಾಂಡೆ ಎಂ.ಎಲ್. ಎ. ಇವರು ಲಖನೌ ಕಿಂಗ ಜಾರ್ಜ ಅಸ್ಪತ್ರಿಯಲ್ಲಿ ೭ನೇ ತಾರೀಕು ನಿಧನಹೊಂದಿದರು. ಆಗಷ್ಟ ಚಳವಳಿಯಲ್ಲಿ ಪೂರ್ವ ಜಿಲ್ಹೆಗಳ ಪರಿಸ್ಥಿತಿ ಪ್ರಕ್ಷುಬ್ಧವಾದ್ದರಿಂದ ಸರಕಾರದವರು ಇವರ ಬಿಡುಗಡೆ ಮಾಡಿದರು. ಚಿತ್ತು ಪಾಂಡೆಯರು ಕೆಲವೇ ಗಂಟೆಗಳಲ್ಲಿ ಸ್ಥಿತಿಯನ್ನು ಹಿಡಿತಕ್ಕೆ ತಂದು ನಗರದಲ್ಲಿ ಶಾಂತಿಯನ್ನುಂಟು ಮಾಡಿದರು. ಜಿಲ್ಹೆಯ ಅಡಳಿತವನ್ನು ವಹಿಸಿಕೊಂಡರು. ಅವರನ್ನು ಪುನಃ ಬಂಧಿಸಿದ ಬಳಿಕ ಜೇಲಿನಲ್ಲಿ ಅವರು ಬಹಳ ಕೆಟ್ಟ ರೀತಿಯಿಂದ ಕಾಲಕಳೆಯಬೇಕಾಯಿತು. ಅಗ ಗಂಟು ಬಿದ್ದ ಬೇನೆಯಿಂದಲೆ ಅವರು ನಿಧನಹೊಂದಿದರು.

ಬನಾರಸದಲ್ಲಿ ಮುಸಲ್ಮಾನರು ಪ್ರತಿವರ್ಷಕ್ಕಿಂತ ದೊಡ್ಡ ಡೋಲಿಯನ್ನು ಕಟ್ಟಿದ್ದರಿಂದ ಮೆರವಣಿಗೆಯ ಕಾಲಕ್ಕೆ ಹಾದಿಯಲ್ಲಿ ಅಶ್ವತ್ಥ ಮರವೊಂದು ಅಡ್ಡ ಬಂದಿತು. ಕೂಡಲೆ ಮುಸಲ್ಮಾನರು ಅದರ ಟೊಂಗೆಗಳನ್ನು ಕಡಿದು ಹಾಕಲು ನಿಶ್ಚಯಿಸಿದರು. ಅದರೆ ಸ್ಥಳಿಕ ಹಿಂದು ಅಶ್ವತ್ಥ ಪವಿತ್ರ ವೃಕ್ಷವಾದ್ದರಿಂದ ಅದಕ್ಕೆ ಅಡ್ಡಿ ಮಾಡಿದರು. ಡೋಲಿಯನ್ನು ಒಂದೆಡೆ ಬಗ್ಗಿಸಿ ಒಯ್ಯಲು ಮೆರವಣಿಗೆಗಾರರು ಒಪ್ಪಲಿಲ್ಲ. ಸ್ವಲ್ಪ ವಿವಾದವೂ ನಡೆದುದಾಯಿತು. ಕೊನೆಗೆ ಪೋಲೀಸರು ಬೀದಿಯನ್ನು ಅಗಿದು ಡೋಲಿ ಹೋಗಲಿಕ್ಕೆ ಅವಕಾಶ ಮಾಡಿಕೊಟ್ಟರು.

ಚಿತಗಾಂಗ ಶಸ್ತ್ರಾಗಾರ ದಾಳಿ ಖಟ್ಲೆಯಲ್ಲಿ ೧೬ ವರ್ಷ ಶಿಕ್ಷೆ ಅನುಭವಿಸಿ ಇತ್ತೀಚೆಗೆ ಬಿಡುಗಡೆ ಹೊಂದಿ ಬಂದ ಗಣೇಶ ಘೋಷರಿಗೆ ಬನಾರಸ ನಗರಸಭೆಯವರು ೮ನೇ ತಾರೀಕು ಮಾನಪತ್ರವನ್ನರ್ಪಿಸಿದರು.

ಕಾಶಿಯ ಹಿಂದು ವಿಶ್ವವಿದ್ಯಾಲಯದವರು ದಿ. ಪಂಡಿತ ಮದನಮೋಹನ ಮಾಲವಿಯವರ ಚರಿತ್ರೆಯನ್ನು ತಯಾರಿಸಲಿರುವರು. ಆದರ ಸಲುವಾಗಿ ವ್ಯಕ್ತಿ ಮತ್ತು ಸಂಸ್ಥೆಗಳಿಂದ ವಿಷಯಗಳನ್ನು ಕಲೆಹಾಕಲು ಒಂದು ಸಮಿತಿಯನ್ನು ಏರ್ಪಡಿಸುವ ಬಗ್ಗೆ ವಿಚಾರ ನಡೆದಿದೆ. ಉಪಕುಲಪತಿಗಳಾದ ಸರ್ ಎಸ್. ರಾಧಾಕೃಷ್ಣನ್‌ರು ಸ್ವದೇಶಕ್ಕೆ ಬಂದಬಳಿಕ ಈ ಬಗ್ಗೆ ವ್ಯವಸ್ಥೆ ಮಾಡಲಾಗುವದೆಂದು ತಿಳಿಯುತ್ತದೆ.

## ಸಿಂಧ

ಸಿಂಧ, ಶಾಸನ ಸಭೆಯ ಚುನಾವಣೆ ೯ ನೇ ತಾರೀಕಿನಲ್ಲಿ ಪ್ರಾಂತದಲ್ಲೆಲ್ಲ ನಡೆಯಿತು. ರಾಷ್ಟ್ರೀಯ ಮತ್ತು ಮುಸ್ಲಿಂ ಲೀಗಿನವರ ಒಳ್ಳೆ ತುರುಸಿನ ಹೋರಾಟ ನಡೆದಿದೆ. ೩೦ ಮುಸಲ್ಮಾನ ಸ್ಥಳಗಳಿಗೆ ೭೦ ಹುರಿಯಾಳುಗಳೂ ೭ ಹಿಂದೂ ಸ್ಥಳಗಳಿಗೆ ೨೦ ಹುರಿಯಾಳುಗಳೂ ಇರುವರು. ಮತಗಣನೆ ೧೨ ಕ್ಕೆ ಪ್ರಾರಂಭವಾಗಿ ಪರಿಣಾಮಗಳೆಲ್ಲ ಹೊರಬೀಳುವವು. ಜಾನೆವಾರಿ ಮಧ್ಯದಲ್ಲಿ ಹೊಸ ಶಾಸನ ಸಭೆ ಪ್ರಾರಂಭವಾಗುವದು.

ಮುಖ್ಯ ಮಂತ್ರಿ ಸರ್ ಗುಲಾಮಹುಸೇನ ಹಿದಾಯತುಲ್ಲಾ ಮತ್ತು ಮೌಲಾಬಕ್ಷರು ಜಮೀನದಾರ ಮತದಾರ ಸಂಘದಿಂದ ಆರಿಸಿ ಬಂದಿದ್ದಾರೆ. ಮೌಲಾಬಕ್ಷರು ರಾಷ್ಟ್ರೀಯ ಪಕ್ಷದ ಪ್ರತಿನಿಧಿಗಳು. ಸ್ವತಂತ್ರ ಕಾಂಗ್ರೆಸ್ ಪಕ್ಷದ ಮುಖಿ ಗೋವಿಂದರಾಮರು ಆರಿಸಿ ಬರಲಿಲ್ಲ.

ಹಿಂದೀಯರು ಈ 'ಆಯತ್ತ ಪ್ರಸಂಗದಲ್ಲಿ ಜಾತಿ,ಮತ ಪಂಥಗಳನ್ನೆಣಿಸದೆ ಮುಂದೆ ಬಂದು ಸ್ವತಂತ್ರ ಪ್ರಜಾಸತ್ತೆಯನ್ನು ಸ್ಥಾಪಿಸಿಕೊಳ್ಳಬೇಕೆಂದು ಸರ್ ಎಸ್. ರಾಧಾಕೃಷ್ಣನ್‌ರು ಪ್ಯಾರಿಸ ಪರಿಷತ್ತಿನಿಂದ ಕರಾಚಿಗೆ ಬಂದ ಕೂಡಲೆ ಹೇಳಿದರು.

ಸಿಂಧ ಗವ್ಹರ್ನರರಿಗೆ ಹೆಚ್ಚಿನ ಭತ್ತೆ ಕೊಡಲು ಕಾಮನ್ಸ ಸಭೆ ಒಪ್ಪಿಗೆ ಕೊಟ್ಟಿದೆ. ೧೯೩೬ ರಿಂದ ಈಚೆಗೆ ಗವರ್ನರರು ತಮ್ಮ ನಿವಾಸ ಸ್ಥಾನವನ್ನು ಬದಲಿಸಿದ್ದರಿಂದ ಅವರ ಭತ್ತೆಯನ್ನು ಹೆಚ್ಚಿಸಲಾಗಿದೆ. ಈ ಭತ್ತೆಯ ಅವಶ್ಯಕತೆಯನ್ನು ವೈಸರಾಯರು ಪರಿಶೀಲಿಸಿದ್ದಾರೆ.



# ಭಾಷಾನ್ವಯ ಪ್ರಾಂತರಚನೆಯನ್ನು ಕೂಡಲೆ ಕೈಕೊಳ್ಳಿರಿ

## ಘಟನಾ ಸಮಿತಿಗೆ ಒತ್ತಾಯದ ಸಲಹೆ

### ದಿವಾಕರರ ಗೊತ್ತುವಳಿಯ ಸ್ವೀಕಾರ

"ಭಾಷಾವಾರ ಪ್ರಾಂತ ರಚನೆಯ ವಿಷಯವನ್ನು ಘಟನಾ ಸಮಿತಿಯು ಮೊದಲನೆಯದಾಗಿ ಕೈಕೊಳ್ಳಬೇಕು" ಎಂದು ಡಾ. ಪಟ್ಟಾಭಿ ಸೀತಾರಾಮಯ್ಯನವರು ೮ ನೇ ತಾರೀಕು ಹೊಸದಿಲ್ಲಿಯಲ್ಲಿ ಸೇರಿದ್ದ ಭಾಷಾವಾರ ಮತ್ತು ಸಾಂಸ್ಕೃತಿಕ ಪ್ರಾಂತ ನಿರ್ಮಾಣ ಪರಿಷತ್ತಿನ ಅಧ್ಯಕ್ಷಸ್ಥಾನದಿಂದ ಮಾತಾಡುತ್ತ ಹೇಳಿದರು.

ಅವರು ಮತ್ತೂ ಹೇಳಿದ್ದೇನೆಂದರೆ:—

ಘಟನಾ ಸಮಿತಿಯ ಪ್ರತಿನಿಧಿಗಳಿಗೆ ತಮ್ಮ ಪ್ರಾಂತಗಳ ಗಚನೆಯ ಅಧಿಕಾರವಿಲ್ಲದಿದ್ದರೆ ರಾಜ್ಯಘಟನೆಯ ರಚನೆಯೇ ಅರ್ಥವಿಲ್ಲದ್ದಾಗುವದು.

ಗಡಿನಿರ್ಣಯ ಸಮಿತಿ ನೇಮಕದ ಬಗ್ಗೆ ಕೆಲವೊಂದು ಅಡಚಣಿಗಳು ಉದ್ಭೂತವಾಗಬಹುದು ಆದರೆ ಇದು ಘಟನಾ ಸಮಿತಿಯ ಪ್ರಶ್ನೆಯೇ ಅಲ್ಲ. ಕೇಂದ್ರ ಸರಕಾರಕ್ಕೆ ಸಂಬಂಧಿಸಿದ ಆಡಳಿತ ಪ್ರಶ್ನೆ ಇದು. ಕೇಂದ್ರ ಸರಕಾರವೇ ಇದನ್ನು ನೇಮಿಸಬೇಕು. ಹಾಗಾದರೆ ಇದನ್ನು ಯಾವಾಗ ನೇಮಿಸಬೇಕು? ಇಲ್ಲಿ ಸಹ ವೇಳೆಯನ್ನು ಕಳೆಯತಕ್ಕದ್ದಲ್ಲ ಯಾಕಂದರೆ ಘಟನಾ ಸಮಿತಿ ಕೇವಲ ನಿರ್ಣಾಯಕ ಸಭೆಇದ್ದು ಅದರ ತೀರ್ಮಾನಗಳನ್ನು ಕಾರ್ಯರೂಪಕ್ಕಿಳಿಸಲು ಸರಕಾರಿ ಸಮಿತಿಗಳಿಗೆ ಅಗತ್ಯವಿರುವದು. ಪ್ರಾಂತಗಳ ಪುನರ್ರಚನೆಯಿಂದ ಘಟನಾ ಸಮಿತಿಯ ಕಾರ್ಯಕ್ಕೆ ಆತಂಕವುಂಟಾಗಲಾರದು.

ಹಿಂದುಸ್ತಾನದ ಸಂಯುಕ್ತ ರಾಜ್ಯ ಘಟನೆಯು ಇನ್ನುಳಿದ ಸಂಯುಕ್ತ ರಾಜ್ಯ ಘಟನೆಗಳಂತೆ ನಿಜವಾದ ಸ್ವಾಯತ್ತ ಪ್ರಾಂತಗಳ ಸಂಯುಕ್ತ ರಾಜ್ಯವಾಗಬೇಕು. ಪೂರ್ಣ ಸ್ವಾಯತ್ತ ಪ್ರಾಂತಗಳೆಂದರೆ ತಂತಮ್ಮ ಭಾಷೆಗಳಿಗೆ ಸಕಲ ವ್ಯವಹಾರ ನಡೆಸಲು ಅನುಕೂಲವಿದ್ದಂಥ ಪ್ರಾಂತಗಳೆಂದೇ ನಾನು ಹೇಳಬಯಸುತ್ತೇನೆ.

ಪ್ರಾಂತಗಳ ಪುನರ್ರಚನೆಯನ್ನು ಕೈಕೊಂಡರೆ ನಾವು ಪುನಃ ಬ್ರಿಟಿಶರ ಅಡಕತ್ತಿನಲ್ಲಿ ಸಿಕ್ಕುವೆವೆಂಬುದೂ ಸುಳ್ಳು. ಯಾಕಂದರೆ, ಮತಾಧಿಕಾರ ಸಮಿತಿ, ಮತದಾರ ಪಟ್ಟಿ ಸಿದ್ಧತೆ ಸಮಿತಿ ಮೊದಲಾದ ಸಮಿತಿಗಳನ್ನು ನೇಮಿಸುವ ಅಧಿಕಾರ ಈಗ ಹಿಂದುಸ್ತಾನ ಸರಕಾರಕ್ಕಿರುವದು.

ದ್ವಿಭಾಷಾ ಪ್ರದೇಶಗಳ ಹಾಗೂ ಅಲ್ಲಿಯ ಅನ್ಯ ಭಾಷೆಯ ಅಲ್ಪಸಂಖ್ಯಾಕರ ಸಮಸ್ಯೆಯನ್ನು ಅಲ್ಪಸಂಖ್ಯಾಕ ಸಮಿತಿಯು ಈ ಘಟನೆಗಳನ್ನು ಪರಿಶೀಲಿಸುವಾಗ ಪರಿಹರಿಸುವದು ಎಂದು ಮುಂತಾಗಿ ಹೇಳಿದರು.

### ಶ್ರೀ ದೇವ ಅವರ ಭಾಷಣ

ಅನಂತರ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಶಂಕರರಾವ ದೇವ ಅವರು ಭಾಷಣ ಮಾಡಿ. ರಾಜ್ಯದ ಹೊಸ ಘಟನೆಯನ್ನು ರಚಿಸುವಾಗ ಭಾಷಾವಾರ ಪ್ರಾಂತಗಳನ್ನು ರಚಿಸುವದು ಅವಶ್ಯವಿದೆಯೆಂದು ಒತ್ತಿ ಹೇಳಿದರು.

### ದಿವಾಕರರ ಗೊತ್ತುವಳಿಯ ಸ್ವೀಕಾರ

"ಬ್ರಿಟಿಶರು ವಿಜಯ ಮತ್ತು ಸಂಸ್ಥಾನಿಕರ ಉಚ್ಚಾಟನೆಯ ಮೂಲಕ ಹಿಂದುಸ್ತಾನದಲ್ಲಿ ಅಸ್ತವ್ಯಸ್ತ ಪ್ರಾಂತಗಳು ಅಸ್ತಿತ್ವಕ್ಕೆ ಬಂದಿರುವದರಿಂದ ಸಂಯುಕ್ತ ರಾಜ್ಯವನ್ನು ನಿಃಸಂದಿಗ್ಧವಾದ ವಿವರಣೆಯುಳ್ಳ ಸಂಸ್ಥಾನ ಅಥವಾ ಪ್ರಾಂತಗಳನ್ನು ಕೂಡಿಸಿ ರಚಿಸುವದು ಕ್ರಮಪ್ರಾಪ್ತವಿರುವದರಿಂದ, ಸಂಯುಕ್ತ ರಾಜ್ಯಕ್ಕೆ ಆಧಾರಭೂತವಾಗಿರುವ ಸ್ವಾಯತ್ತ ಪ್ರಾಂತಗಳು ಜನ, ಭಾಷೆ ಮತ್ತು ಸಂಸ್ಕೃತಿ ದೃಷ್ಟಿಯಿಂದ ಸಮಜಾತಿಯವಿರುವದು ಅಗತ್ಯವಿರುವದರಿಂದ, ಘಟನಾ ಸಮಿತಿ, ಕೇಂದ್ರ ಶಾಸನ ಸಭೆ ಹಾಗೂ ಭಾಷಾವಾರ ಪ್ರಾಂತ ರಚನೆಗೆ ಬೆಂಬಲ ಕೊಡುವ ಸಂಸ್ಥೆಗಳ ಪ್ರತಿನಿಧಿಗಳ ಈ ಪರಿಷತ್ತು ಭಾಷಾವಾರ ಪ್ರಾಂತರಚನೆಯ ತತ್ವವನ್ನು ಘಟನಾಸಮಿತಿಯು ಪಾಸ್ತಾವಿಕಸಭೆಯಲ್ಲಿಯೇ ಅಂಗೀಕರಿಸಬೇಕೆಂದು ಮತ್ತು ಅಂತಹ ಪ್ರಾಂತಗಳನ್ನು ಹಿಂದುಸ್ತಾನದ ಹೊಸ ಘಟನೆ ಸ್ವೀಕೃತವಾದ ಕೂಡಲೆ ಹಾಗೂ ಆಂಗ್ಲ—ಭಾರತೀಯರಲ್ಲಿ ಒಪ್ಪಂದವಾಗುವ ಪೂರ್ವದಲ್ಲಿ ರಚಿಸುವಂತೆ ಸೂಕ್ತ ಉಪಾಯ ಕೈಕೊಳ್ಳಬೇಕೆಂದು ಸಿಫಾರಸು ಮಾಡುತ್ತದೆ."

ಶ್ರೀ ದಿವಾಕರರು ಅದರ ವಿಷಯದಲ್ಲಿ ಭಾಷಣ ಮಾಡುತ್ತ ಹೀಗೆ ಹೇಳಿದರು.

ಘಟನಾ ಸಮಿತಿಯು ಭಾಷಾವಾರ ಪ್ರಾಂತ ರಚನೆಯ ಪ್ರಶ್ನೆಯನ್ನು ಬಿಡಿಸುವದು ಅಗತ್ಯವಿದೆ. ಈ ಪ್ರಶ್ನೆಯನ್ನು ಸುಗಮವಾಗಿ ಬಿಡಿಸಲ ಅನುಕೂಲವಾಗುವಂತೆ ಘಟನಾ ಸಮಿತಿಯು ಅವಶ್ಯವಿರುವ ಉಪಾಯಗಳನ್ನು ಕೈಕೊಳ್ಳಬೇಕು. ಮಂತ್ರಿತ್ರಯರು ಭಾಷಾವಾರ ಪ್ರಾಂತ ರಚನೆಯ ಪ್ರಶ್ನೆಯನ್ನು ತಮ್ಮ ಘೋಷಣೆಯಲ್ಲಿ ಎತ್ತಿರದಿದ್ದರೂ ಘಟನಾ ಸಮಿತಿಯು ಭಾಷಾವಾರ ಪ್ರಾಂತರಚನೆಯ ಕಾರ್ಯ ಕೈಕೊಳ್ಳಕೂಡದೆಂದು ಎಲ್ಲಿಯೂ ಹೇಳಿಲ್ಲ. ಒಂದು ವೇಳೆ ಭಾಷಾವಾರ ಪ್ರಾಂತ ರಚನೆಯ ಪ್ರಶ್ನೆಯನ್ನು ಘಟನಾ ಸಮಿತಿಯು ಬಿಡಿಸಲು ಅಸಮರ್ಥವಾಗಿದ್ದರೆ ಇಂಥ ಘಟನಾಸಮಿತಿ ಸೇರಿ ಉಪಯೋಗವೇನು? ಈ ಪ್ರಶ್ನೆಯನ್ನು ನಾವು ಈಗಲೇ ಬಿಡಿಸದಿದ್ದರೆ, ಇದನ್ನು ಮುಂದ ಎಂದೂ ಬಿಡಿಸಲು ಬಾರದಷ್ಟು ಇತರ ತೊಡಕು ಉಂಟಾಗಬಹುದು. ಭಾಷಾವಾರ ಪ್ರಾಂತರಚನೆಯನ್ನು ಬಿಟ್ಟುಕೊಡುವದೆಂದರೆ ತಮ್ಮ ಏಳ್ಗೆಗಾಗಿ ಉತ್ಕಂಠರಾಗಿರುವ ಅಸಂಖ್ಯ ಜನರಿಗೆ ಅವರ ಏಳ್ಗೆಯ ಎಲ್ಲ ಅನುಕೂಲತೆಗಳನ್ನು ನಿರಾಕರಿಸಿ ಅವರನ್ನು ಹತ್ತಿಕ್ಕಿದಂತಾಗುವದು. ಭಾಷಾವಾರ ಪ್ರಾಂತ ರಚನೆಯಾದರೆ, ಎಲ್ಲ ಪ್ರಾಂತಗಳೂ ಪ್ರಗತಿ ಹೊಂದಿ ಅವು ಭಾರತ ರಾಷ್ಟ್ರದ ಭದ್ರವಾದ ಘಟಕಗಳಾಗುವದರಿಂದ, ಭಾರತ ರಾಷ್ಟ್ರದ ಭದ್ರತೆಯನ್ನು ಸಾಧಿಸಿದಂತಾಗುವದು. ರಶಿಯಾ ದೇಶದಲ್ಲಿ ಭಾಷೆ ಹಾಗೂ ಸಾಂಸ್ಕೃತಿಕ ಘಟಕಗಳನ್ನೇ ಸ್ವಾಯತ್ತ ಪ್ರಾಂತಿಕ ಘಟಕಗಳನ್ನಾಗಿ ಮಾಡಿರುವದೆ, ರಶಿಯಾ ದೇಶದ ಬಲಾಢ್ಯತೆಗೆ ಕಾರಣವಾಗಿದೆ. ಈ ಗೊತ್ತುವಳಿಯಲ್ಲಿ ಹಿಂದೀ ಸಂಸ್ಥಾನಗಳ ಬಗ್ಗೆ ಸ್ಪಷ್ಟವಾಗಿ ಹೇಳಿರದಿದ್ದರೂ ಅವುಗಳ ಪ್ರಜೆಗಳು ನೆರೆಯ ಬ್ರಿಟಿಷ ಪ್ರಾಂತದಲ್ಲಿ ಸಮಾವೇಶ ಹೊಂದಬೇಕೆಂದು ಇಚ್ಛಿಸಿದರೆ ಅವುಗಳನ್ನು, ಅಥವಾ ಅವುಗಳ ಭಾಗಗಳನ್ನು ನೆರೆಯ ಬ್ರಿಟಿಷ ಪ್ರಾಂತದಲ್ಲಿ ಸಮಾವೇಶ ಪಡಿಸಿಕೊಳ್ಳಬೇಕಾಗುವದು. ಇದನ್ನು ಕಡೆಗಣಿಸುವದು ಶಕ್ಯವಿಲ್ಲ. ಆದರೆ ಈಗ ಮೊದಲು ಆಗಬೇಕಾದದ್ದು ಭಾಷಾವಾರ ಪ್ರಾಂತರಚನೆ. ಆ ಬಗ್ಗೆ ಈಗ ಇರುವ ಪ್ರಾಂತಗಳನ್ನು ಬೇರೆ ಬೇರೆ ಭಾಷೆಯ ಪ್ರದೇಶಗಳ ಹೊಸ ಪ್ರಾಂತಗಳಾಗುವಂತೆ ವಿಭಜಿಸುವದು. ಇದನ್ನು ಘಟನಾ ಸಮಿತಿಯು ಮಾಡಬೇಕಾಗಿದೆ.

ಕೆ. ಸಂತಾನಂ ಎಂ. ಆರ್. ಜಯಕರ, ಸೇಟ ಗೋವಿಂದದಾಸ, ಡಾ. ಪಿ. ಎನ್. ಬ್ಯಾನರ್ಜಿ, ಪಂ. ಠಾಕುರದಾಸ ಭಾರ್ಗವದಾಸ, ಡಾ. ಶ್ಯಾಮಪ್ರಸಾದ ಮುಕರ್ಜಿ, ಬೊಬ್ಬಿಲಿಯ ರಾಜಾ, ಕಾಳೇಶ್ವರರಾವ ಮತ್ತು ಪುರುಷೋತ್ತಮರಾವ ಇವರು ಈ ಗೊತ್ತುವಳಿಯ ಮೇಲೆ ಮಾತಾಡಿದರು. ಅದು ಸ್ವೀಕೃತವಾಯಿತು.

ಪರಿಷತ್ತು ಕೆಳಗೆ ಕಾಣಿಸಿದ ಮಹನೀಯರ ಕಾರ್ಯಸಮಿತಿಯೊಂದನ್ನು ನೇಮಿಸಿರುತ್ತದೆ ಶ್ರೀಗಳಾದ ಡಾ. ಎಂ. ಆರ್. ಜಯಕರ, ಸರ್. ಎಸ್. ರಾಧಾಕೃಷ್ಣನ್, ಶಂಕರರಾವ ದೇವ, ಡಾ. ಶ್ಯಾಮಪ್ರಸಾದ ಮುಕರ್ಜಿ, ಕೆ. ಎಂ. ಮುನಶಿ, ಕೆ. ಸಂತಾನಂ, ಲಾಲಾ ದೇಶಬಂಧು ಗುಪ್ತ, ಕೆ. ಮಾಧವ ಮೆನನ್, ಗೋಪಿನಾಥ ಬಾರ್ಡೋಲಾಯ, ಸೇಟ ಗೋವಿಂದದಾಸ, ಡಾ. ಪ್ರಫುಲ್ಲ ಚಂದ್ರ ಘೋಷ, ರಂಗನಾಥ ದಿವಾಕರ, ಎಸ್. ನಿಜಲಿಂಗಪ್ಪ, ಡಾ. ಪಂಜಾಬರಾವ ದೇಶಮುಖ, ಚೌಧರಿ ಚರಣಸಿಂಗ, ಮುಕ್ತಬಿಹಾರಿಲಾಲ, ರಾಯಬಹಾದ್ದೂರ ಸುರಜಮಲ್ ಮತ್ತು ಕಾಲಾ ವೆಂಕಟರಾವ.

ಈ ಪರಿಷತ್ತಿಗೆ ಸುಮಾರು ೧೫೦ ಪ್ರತಿನಿಧಿಗಳು ಆಗಮಿಸಿದ್ದರು.

ಶೇಖ ಅಹಮ್ಮದ ಎಂಬ ಕಾಂಟ್ರ್ಯಾಕ್ಟರರಿಗೆ ಗುರುದಾಸಪುರ ಡೆಪ್ಯುಟಿ ಕಮೀಶನರರು ಕೊಟ್ಟ ಕಾಂಟ್ರ್ಯಾಕ್ಟ ಸರ್ಟಿಫಿಕೇಟಿನಲ್ಲಿ 'ಮೀಟ' ಎಂಬ ಶಬ್ದ ಹೊಸದಾಗಿ ಸೇರಿಸಿ ಗುತ್ತಿಗೆ ದೊರಕಿಸಿಕೊಟ್ಟದ್ದಕ್ಕಾಗಿ ಪಂಜಾಬ'ದಂಡಿನ ಖರೀದಿ ಶಾಖೆಯ ಡೆ. ಅಸಿಸ್ಟಂಟ ಡಾಯರೆಕ್ಟರ ಕ್ಯಾ. ಸಿರಿಲ್ ಹಂಟ ಸುಭೇದಾರ ಸಂತಾರಾಮ ಭಾಟಿಯಾ ಹಾಗು ಕಾಂಟ್ರ್ಯಾಕ್ಟರ ಶೇಖ ಅಹಮ್ಮದರ ಮೇಲೆ ವಿಶೇಷ ನ್ಯಾಯಾಲಯದಲ್ಲಿ ಖಟ್ಲೆ ಹಾಕಲಾಗಿದೆ.

# ಘಟನಾ ಸಮಿತಿಗೆ ಮೈಸೂರು ಸದಸ್ಯರು

## ಆಯ್ಕೆಯ ರೀತಿ ಇನ್ನೂ ನಿರ್ಧಾರವಾಗಿಲ್ಲ

### ಮೈಸೂರು ವಿಧಾಯಕ ಸಭೆಯ ಪ್ರಾರಂಭ

ಮೈಸೂರು ನ್ಯಾಯವಿಧಾಯಕ ಸಭೆಯ ಚಳಿಗಾಲದ ಅಧಿವೇಶನ ತಾ. ೯ ಕ್ಕೆ ಬೆಂಗಳೂರಲ್ಲಿ ರಾಜಮಂತ್ರ ಪ್ರವೀಣ ಎಚ್. ಬಿ. ಗುಂಡಪ್ಪ ಗೌಡರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು.

ಆರೋಗ್ಯ ಮಂತ್ರಿ ಡಾ. ರಾಯನ್ನರು ಸಭೆಗೆ ಬಂದದ್ದರ ವಿಷಯದಲ್ಲಿ ಕಾಂಗ್ರೆಸ್ ಪಕ್ಷದ ಶ್ರೀ ಮರಿಯಪ್ಪನವರು ಮೊದಲನೆ ದಿನವೇ ಮಹತ್ವದ ವಿಧಿಬಿಂದುವನ್ನೆತ್ತಿದರು. ಅವರು ಸಭೆಯ ಸದಸ್ಯರಾಗಿದ್ದರೂ ಸದ್ಯಕ್ಕೆ ದಿವಾಣ ರಾಮಸ್ವಾಮಿಯವರ ಸ್ಥಾನದಲ್ಲಿ ತಾತ್ಪೂರ್ತಿಕ ದಿವಾಣರಾಗಿರುವದರಿಂದಲೂ ದಿವಾಣರು ನ್ಯಾಯವಿಧಾಯಕ ಸಭೆಯ ಸದಸ್ಯರಲ್ಲದ್ದರಿಂದಲೂ ಅವರು ಬರುವದು ಸರಿಯಲ್ಲವೆಂಬ ಶ್ರೀ ಮರಿಯಪ್ಪನವರ ವಾದದಲ್ಲಿ ಹುರುಳಿದೆಯೆಂದೊಪ್ಪಿ ಮರುದಿನಕ್ಕೆ ಆ ವಿಚಾರ ಚರ್ಚೆಯನ್ನಿಟ್ಟರು.

**ಬ್ಯಾಂಕಿಂಗಿನ ರಾಷ್ಟ್ರೀಕರಣ**

"ಮೈಸೂರಿನ ಇಡಿ ಬ್ಯಾಂಕಿಂಗ್ ಪ್ರಣಾಲಿಯನ್ನೆ ರಾಷ್ಟ್ರೀಕರಿಸುವ ಪ್ರಶ್ನೆಯನ್ನು ಪರಿಶೀಲಿಸಲು ಒಂದು ಸಮಿತಿಯನ್ನು ನೇಮಿಸಬೇಕೆಂಬ ಶ್ರೀ ಎಚ್. ಎಂ. ಚನ್ನಬಸಪ್ಪ (ಕಾಂ.) ನವರ ಗೊತ್ತುವಳಿಯ ಮೇಲೆ ಚರ್ಚೆ ನಡೆಯಿತು. ಈಗ ಮೈಸೂರು ದೇಶದ ಹಣಕಾಸಿನ ಸಂಪತ್ತಿಯನ್ನು ಹೊರಗಿನವರು ಶೋಷಿಸುತ್ತಿರುವದರಿಂದ ಬ್ಯಾಂಕಿಂಗ್ ವೃತ್ತಿಯನ್ನು ರಾಷ್ಟ್ರೀಕರಿಸಿದರೆ ಸಂಪತ್ತಿ ದೇಶದಲ್ಲಿ ಉಳಿದು ಯುದ್ಧೋತ್ತರ ಅಭಿವೃದ್ಧಿ ಯೋಜನೆಗಳಿಗೆ ಸಹಕಾರಿಯಾದೀತೆಂದು ಶ್ರೀ ಮರಿಯಪ್ಪನವರು ವಾದಿಸಿದರು. ಧರ್ಮಪ್ರಕಾಶ ವೆಂಕಾಜಿರಾವ, ಸಯ್ಯದ ಅಬ್ದುರ್ರಹ್ಮಾನ್, ಧ. ಪ್ರ. ದೇವರಾವ ಶಿವರಾಮ ಮೊದಲಾದವರು ವಿರುದ್ಧವಾಗಿಯೂ ಶ್ರೀ ಮಹಮ್ಮದ ಶರೀಫರು ಅನುಕೂಲವಾಗಿಯೂ ಮಾತಾಡಿದರು. ಚರ್ಚೆ ಮುಗಿದಿಲ್ಲ.

**ಬೆಲ್ಲದ ನಿಲುವಳಿ**

ಬೆಲ್ಲದ ಬೆಲೆಯನ್ನು ನಿಯಂತ್ರಿಸಿದ್ದರಿಂದ ಈ ಬಾರಿ ಬೆಲೆಯ ಕಷ್ಟ ಕಾಲದಲ್ಲಿ ರೈತನಿಗೆ ಹಾನಿಯಾಗಿದೆಯೆಂದು ವಾದಿಸಿ ಪ್ರಜಾ ಪಕ್ಷದ ಶ್ರೀ ಗುರುವಾರೆಡ್ಡಿಯವರು ತಂದ ನಿಲುವಳಿ ಸೂಚನೆಯ ಮೇಲೆ ತಕ್ಕಷ್ಟು ಚರ್ಚೆಯಾಯಿತು. ಬೆಲ್ಲದ ಬೆಲೆ ನಿಯಂತ್ರಣವನ್ನು ಒಡನೆ ತೆಗೆದು ಹಾಕಿ ರೈತನ ಕೈಲಿ ನಾಲ್ಕು ದುಡ್ಡು ಸೇರಗೊಡಬೇಕೆಂಬ ವಾದಕ್ಕೆ ಕಾಂಗ್ರೆಸ ಪಕ್ಷದವರು ಬೆಂಬಲವಿತ್ತರು. ಶ್ರೀ ಮಹಮ್ಮದ ಇಮಾಮರು ಇದರಿಂದ ೧೦ ಜನ ಹಿತವಾಗಿ ೯೦ ಜನರು ತೊಂದರೆ ಪಡಬೇಕಾಗುವದರಿಂದ ನಿಯಂತ್ರಣವನ್ನು ತೆಗೆಯಬಾರದೆಂದರು. ಸರಕಾರದ ಪರವಾಗಿ ಉತ್ತರವಿತ್ತ ಆಹಾರ ನಿರ್ದೇಶಕ ಶ್ರೀ ಗುರುದತ್ತರು ಬೆಲ್ಲದ ನಿಯಂತ್ರಣದಲ್ಲಿ ರೈತ ಮತ್ತು ಜನಸಾಮಾನ್ಯರಿಬ್ಬರ ಹಿತವನ್ನೂ ಅನುಲಕ್ಷಿಸಲಾಗಿದೆಯೆಂದರು. ನಿಲುವಳಿ ಸೂಚನೆ ೭೬ ವಿರುದ್ಧ ೩೧ ಮತಗಳಿಂದ ಬಿದ್ದು ಹೋಯಿತು.

ಪ್ರಶ್ನೋತ್ತರ ಕಾಲದಲ್ಲಿ ಶಿವಮೊಗ್ಗೆಯಲ್ಲಿ ಸಕ್ಕರೆ ಕಾರಖಾನೆಗೆ ಯಂತ್ರ ಸಾಮುಗ್ರಿಗಳನ್ನು ದೊರಕಿಸಲು ಕೇಂದ್ರ ಸರಕಾರದೊಡನೆ ಪತ್ರವ್ಯವಹಾರ ನಡೆದಿದೆಯೆಂದು ತಿಳಿಸಲಾಯಿತು.

ತಾತ್ಪೂರ್ತಿಕ ಹಣಕಾಸಿನ ಕಾರ್ಯದರ್ಶಿಗಳಾದ ಶ್ರೀ ಶಾಮಣ್ಣನವರು ೧೯೪೬—೪೭ ರ ಬಗ್ಗೆ ೪೪,೯೬,೩೧೦ ರೂಪಾಯಿಯ ಪುರವಣಿ ಬೇಡಿಕೆಯನ್ನು ಮಂಡಿಸಿದರು.

**ಘಟನಾಸಮಿತಿಯ ಪ್ರಾತಿನಿಧ್ಯ**

ಶ್ರೀ ಸಯ್ಯದ ಅಬ್ದುರ್ರಹಮಾನರ ಪ್ರಶ್ನೆಗೆ ಉತ್ತರವೀಯುತ್ತ ತಾ. ೧೦ ಕ್ಕೆ ಮುಖ್ಯ ಕಾರ್ಯದರ್ಶಿ ಶ್ರೀ ವೇದವ್ಯಾಸಾಚಾರ್ಯರು ಮೈಸೂರು ಸರಕಾರದವರು ಹಿಂದೀ ಘಟನಾ ಸಮಿತಿಯಲ್ಲಿ ಭಾಗ ವಹಿಸಲು ಅನೌಪಚಾರಿಕವಾಗಿ ನಿರ್ಧರಿಸಿದ್ದಾರೆಂದೂ ಮೈಸೂರಿಗೆ ಸುಮಾರು ೭ ಪ್ರತಿನಿಧಿಗಳು ದೊರಕಬಹುದೆಂದೂ ತಿಳಿಸಿದರು. ಈ ಬಗ್ಗೆ ಕೇಳಲ್ಪಟ್ಟ ಅನೇಕ ಉಪಪ್ರಶ್ನೆಗಳಿಗೆ ಪ್ರತಿನಿಧಿಗಳನ್ನು ಆರಿಸಿ ಕಳಿಸುವ ಕ್ರಮದ ಬಗ್ಗೆ ಇನ್ನೂ ಯಾವದೇ ಬಗೆಯ ನಿರ್ಣಯವಾಗಿಲ್ಲವೆಂದು ತಿಳಿಸಲಾಯಿತು.

# ವ್ಯಾಪಾರ ಪ್ರಪಂಚ

## ಮುಂಬಯಿ ಶೇರ ಪೇಟೆ

ತಾ. ೧೧

ರಾಜಕೀಯ ವಾತಾವರಣದ ನಿರಾಶಾವಾದ ಮುಂಬಯಿ ಶೇರ ಪೇಟೆಯ ಮೇಲೆ ಪರಿಣಾಮ ಮಾಡಿದೆಯೆಂದು ಹೇಳಬೇಕು. ಕಳೆದೇಳು ದಿನಗಳಲ್ಲಿ ಪಾಲುಗಳಲ್ಲಿ ಏರಿಳಿತ ವಿಶೇಷವಾಗಿತ್ತು. ಟಾಟಾ ಡೆಫರ್ಡ ಪಾಲು ೨೬೩೦ ಕ್ಕಿಳಿದು ೨೬೭೨—೦—೦ ರ ವರೆಗೆ ಸುಧಾರಿಸಿದರೂ ಮತ್ತೆ ೨೬೫೬—೮—೦ ಕ್ಕೆ ಕೆಳಗೆ ಹೋಯಿತು. ಬಾಂಬೆ ಡಾಯಿಂಗ ೨೬೬೭—೦—೦ ರ ವರೆಗೇರಿ ೨೬೪೨-೦-೦ ಕ್ಕೆ ಬಂತು. ಫಿನ್ಲೇ ೩೮೨-೦-೦ ರಿಂದ ೩೭೨—೦—೦ ಕ್ಕಿಳಿದು ೩೭೬—೦—೦ ಕ್ಕೇರಿ ೩೭೩—೦—೦ ಕ್ಕೆ ಬಂದರೆ ಕೊಹಿನೂರು ೮೬೪ ಕ್ಕಿಳಿದು ೮೮೦-೦-೦ ರ ವರೆಗೇರಿ ೮೬೯-೦-೦ ಕ್ಕೂ, ಸ್ವದೇಶಿ ೬೯೨-೦-೦ ಕ್ಕಿಳಿದು ೭೦೬ ಕ್ಕೇರಿ ೭೦೨ ಕ್ಕೂ ಗೋಕಾಕ ೩೫೦-೦-೦ ಕ್ಕಿಳಿದು ೩೬೫-೦-೦ ಕ್ಕೇರಿ ೩೫೯-೦-೦ ಕ್ಕಿಳಿಯಿತು. ಸೆಂಟ್ರಲ್ ಇಂಡಿಯಾ ೪೦೪—೦—೦ ಕ್ಕಿಳಿದು ೪೦೮—೦—೦ ಕ್ಕೇರಿದೆ. ಸಿಂಧ್ಯ ಸ್ಟೀಮ ೪೪-೧೪—೦ ಕ್ಕಿಳಿದು ೪೬-೨-೦ ರ ವರೆಗೇರಿ ೪೫-೬-೦ ಕ್ಕೆ ಬಂದಿತು. ಅಸೋಸಿಯೇಟೆಡ್ ಸಿಮೆಂಟ್ಸ ೨೨೮-೦-೦ ಕ್ಕಿಳಿದು ೨೩೧-೪-೦ ಗೇರಿ ೨೨೯-೧೨-೦ ಕ್ಕಿಳಿಯಿತು. ಬ್ಯಾಂಕುಗಳಲ್ಲಿ ಇಂಪೀರಿಯಲ ಎಸ್. ಸಿ. ೨೬೮೦—೦—೦ ಕ್ಕಿಳಿದು ೨೭೦೫—೦—೦ ಕ್ಕೇರಿ ೨೬೯೭—೮—೦ ಗೂ ಸೆಂಟ್ರಲ ಬ್ಯಾಂಕು ೧೧೪-೦-೦ ಕ್ಕಿಳಿದು ೧೧೯—೦—೦ ಕ್ಕೇರಿ ೧೧೫—೦—೦ ಕ್ಕೂ ರಿಝರ್ವ ಬ್ಯಾಂಕ ೧೪೯—೦—೦ ಕ್ಕಿಳಿದು ೧೫೧-೦-೦ ಕ್ಕೇರಿತು.

ಸರಕಾರಿ ಪತ್ರಗಳಲ್ಲಿ ಜಿ. ಪಿ. ನೋಟು ೩೦೩-೯-೦ ಕ್ಕಿಳಿದು ೧೦೩-೧೦-೬ ಗೂ ೧೯೪೭-೫೦ ರ ಸಾಲ ೧೦೧-೧೪-೦ ರಲ್ಲಿ ಯಥಾ ಸ್ಥಿತಿಯೂ ಇವೆ.

## ಚಿನ್ನ ಬೆಳ್ಳಿ

ಸರಾಫ ಕಟ್ಟೆಯಲ್ಲಿ ಮತ್ತೆ ವಾಯಿದಾ ವ್ಯಾಪಾರ ಇದೀಗ ಪ್ರಾರಂಭವಾಗಿದೆ. ಚಿನ್ನ ಬೆಳ್ಳಿಗಳೆರಡೂ ಈ ವಾರ ತಕ್ಕಮಟ್ಟಿನ ಸುಧಾರಣೆ ತೋರಿಸಿ ತಯಾರಿ ಚಿನ್ನ ೧೦೦-೦-೦ ಗೂ ಜನೆವರಿ ವಾಯದಾ ೯೩-೧೨-೦ ಕ್ಕೂ ಹೋಗಿದ್ದರೆ ಬೆಳ್ಳಿ ತಯಾರಿ ೧೩೯-೦-೦ ಕ್ಕೂ ಜನೆವರಿ ವಾಯದಾ ೧೩೨—೧೨—೦ ಮತ್ತು ಮಾರ್ಚ ವಾಯದಾ ೧೩೩-೪-೦ ರಲ್ಲಿಯೂ ಇವೆ.

ಸರಕಾರದ ಅರಳೆ ಧೋರಣೆಯಲ್ಲಿ ಬದಲಾವಣೆಯಿಲ್ಲವೆಂದು ತಿಳಿದು ಬಂದಿದೆ. ಜನೆವರಿ ಹೊಸ ಅರಳೆ ೪೬೭-೦-೦ ರ ವರೆಗೇರಿದರೂ ಮುಂದೆ ೪೬೭—೦—೦ ಕ್ಕಿಳಿದು ಬಿಟ್ಟಿತು. ಮಾರ್ಚ ೪೭೭—೧೨—೦, ಮೇ ೪೮೬—೧೨—೦ ಜುಲೈ ೪೯೬—೧೨—೦ ಮತ್ತು ಸಪ್ಟೆಂಬರ ೫೦೪-೦-೦.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೦೯-೦-೦ |
| ಅಗಸಿ | ೨೩-೨-೦ |
| ಅಗಸಿ ಎಣ್ಣೆ | ೧೬-೮-೦ |

### ಶಿವಮೊಗ್ಗೆ

| | | |
|---|---|---|
| ಅಡಿಕೆ ದೇಶಾವರ ನಂ ೧ ಮಣ ೧ ಕ್ಕೆ | | ೩೮-೪೦ |
| ,, ,, | ೨ | ೩೫-೩೮ |
| ರಾಜಾ ಅಲವು | | ೩೪-೩೭ |
| ನುಲಿ | | ೩೬-೩೯ |
| ಬೆಟ್ಟ ವಂತಿ | | ೨೭-೨೯ |
| ಬೆಟ್ಟ | | ೨೫-೨೬॥ |
| ತೊರೆಸಾಲು | | ೩೪—೩೬ |
| ಮೆಣಸು | | ೨೬-೨೭ |

### ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ ಬಂಗಾಲಿ ಮಣ ರೂ. | | ೧೪೦ |
| ಅರಿಷಣ ಹೇರು | | ೯೭-೯೯-೮-೦ |
| ಶೇಂಗಾ ಖಂಡಿ | ,, | ೭೦-೮೫ |
| ಮೆಣಸಿನಕಾಯಿ ಹೇರು | ,, | ೧೨೫-೨೦೦ |
| ಮಿರ್ಜ ತಂಬಾಕು ಹೇರು | | ೧೫೦-೨೫೦ |
| ತಂಬಾಕ ಪಂಢರಪುರಿ | ,, | ೧೫೦-೨೫೦ |
| ತಂಬಾಕು ಅಕೋಳ(ಹೇರು) | | ೨೫೦-೪೦೦ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೮೦-೨೮೫ |
| ,, | ನಂ. ೨ | ೨೭೦-೨೭೫ |
| ,, | ನಂ. ೩ | ೨೬೦-೨೬೫ |
| ಅಪ್ಲಂಡ ಹತ್ತಿ | | ೨೬೦-೨೬೫ |
| ಜಿನ | | ೨೦೦-೨೦೫ |
| ಸಾಜಿನ | | ೧೮೦-೧೯೫ |
| ಡಬಲರೋಲ | | ೧೯೦-೧೯೫ |

# ಬೆಂಗಳೂರು-ಮೈಸೂರು

ಘಟನಾ ಸಮಿತಿಯ ಸಂಸ್ಥಾನ ಸಂಧಾನ ಸಮಿತಿಯನ್ನು ಪ್ರಜಾಸತ್ತಾತ್ಮಕವಾಗಿ ಪುನರ್ರಚಿಸಬೇಕೆಂಬ ಮೈಸೂರು ಕಾಂಗ್ರೆಸ್ ಕಾರ್ಯ ಸಮಿತಿಯ ಗೊತ್ತುವಳಿ ಅ. ಭಾ. ಕಾಂಗ್ರೆಸ್ ಕಾರ್ಯ ಸಮಿತಿಗೆ ಕಳಿಸಲ್ಪಟ್ಟಿದ್ದು, ಅದು ಕಾರ್ಯ ಸಮಿತಿಯ ಮುಂದಿಡಲ್ಪಡುವದೆಂದು ಉತ್ತರ ಬಂದಿದೆಯೆಂದು ತಿಳಿಯುತ್ತದೆ.

ಬೆಂಗಳೂರಲ್ಲಿ ನಡೆದ ಮೈ. ಕಾಂಗ್ರೆಸ್ ಕಾರ್ಯ ಸಮಿತಿಯ ಸಭೆಯಲ್ಲಿ ಸತ್ಯಾಗ್ರಹ ಸಮಿತಿಯ ವರದಿಯನ್ನು ಪರಿಶೀಲಿಸಿ ಕೆಲ ಗೊತ್ತುವಳಿಗಳಾದವು. ಕಾಂಗ್ರೆಸ್ ಅಧ್ಯಕ್ಷರು ಈಗ ಹೋರಾಟದ ಕಾರ್ಯಕ್ರಮದ ಪ್ರಚಾರ ಮಾಡುತ್ತ ಸಂಸ್ಥಾನದಲ್ಲಿ ಅಲ್ಲಲ್ಲಿ ಸಂಚರಿಸುತ್ತಿದ್ದಾರೆ.

ಮಳೆಯಿಂದ ಮೈಸೂರು ಸಂಸ್ಥಾನದಲ್ಲಿ ಎಷ್ಟೋ ಕಡೆ ಬೆಳೆಗಳಿಗೆ ಹಾನಿಯಾಗಿರುವದರಿಂದ ಆಹಾರ ಎತ್ತುವಳಿ ಪ್ರಮಾಣವನ್ನು ಸರಕಾರದವರು ಕಡಿಮೆ ಮಾಡಬೇಕೆಂಬ ಆಶಯದ ಗೊತ್ತುವಳಿಯನ್ನು ಮೈಸೂರು ಕಾಂಗ್ರೆಸ ಕಾರ್ಯ ಸಮಿತಿ ಮಾಡಿದೆ.

ಸುಪ್ರಸಿದ್ಧ ಗಮಕಿಗಳಾಗಿದ್ದ ಸಂಗೀತ ಶ್ಲೋಕ ವಿದ್ವಾನ್ ಗಮಕಿ ಶ್ರೀ ಕೆ ಜಿ ಸಂಪತ್ಕುಮಾರಾಚಾರ್ಯರು ತಾ. ೫ ಕ್ಕೆ ಬೆಂಗಳೂರ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ನಿಧನಹೊಂದಿದರೆಂದು ತಿಳಿಸಲು ವಿಷಾದವಾಗುತ್ತದೆ. ಶ್ರೀ ಆಚಾರ್ಯರು ಕನ್ನಡಕ್ಕೆ ಅವಿರತವಾಗಿ ಸೇವೆ ಸಲ್ಲಿಸಿದವರು. ಮರಣಕಾಲದಲ್ಲಿ ಅವರಿಗೆ ಬರಿ ೪೨ ವಯಸ್ಸಾಗಿತ್ತು.

ಮೈಸೂರು ಕೃಷ್ಣ ರಾಜೇಂದ್ರ ಆಸ್ಪತ್ರೆಯ ಬಳಿ ಕಟ್ಟಲಾಗುತ್ತಿರುವ ಒಂದು ಕಟ್ಟಡದಲ್ಲಿ ಮಹಡಿ ಭಾಗದಿಂದ ಕಬ್ಬಿಣದ ಸಲಾಕೆ ಹಾಕುತ್ತಿರುವಾಗ ಅದು ವಿದ್ಯುತ್ ತಂತಿಗೆ ತಗಲಿ ಅದನ್ನು ಹಿಡಿದಿದ್ದ ಶ್ರೀ ಎಂ. ಕೆ. ರಾಮಸ್ವಾಮಿ ಎಂಬವರೂ ಅವರನ್ನು ಬಿಡಿಸಲು ಪ್ರಯತ್ನ ಮಾಡಿದ ತಮ್ಮಯ್ಯ ಎಂಬವರೂ ವಿದ್ಯುತ್ ಧಕ್ಕೆಯಿಂದ ತಕ್ಷಣ ಮರಣ ಹೊಂದಿದರು.

ಸಂಸ್ಥಾನದಲ್ಲಿ ಪಾನನಿರೋಧವನ್ನು ಜಾರಿಗೆ ತರುವ ವಿಷಯ ವಿಚಾರಿಸಲು ಹಿಂದಿನ ಮಂತ್ರಿಗಳಾದ ಶ್ರೀ ಜೆ. ಎಂ. ಇಮಾಮರ ಅಧ್ಯಕ್ಷತೆಯಲ್ಲಿ ಅಧಿಕಾರಿಗಳಿಂದ ಹಾಗು ಪ್ರತಿನಿಧಿ ಮತ್ತು ಶಾಸನ ಸಭೆಗಳ ಸದಸ್ಯರಿಂದೊಡಗೂಡಿದ ಸಮಿತಿಯೊಂದು ನೇಮಿಸಲ್ಪಟ್ಟಿದೆ.

# ದಕ್ಷಿಣ ಕನ್ನಡ

ಶ್ರೀ ಟಿ. ಪಿ. ಕೈಲಾಸಂ ಅವರ ನಿಧನ ನಿಮಿತ್ತ ದುಃಖಪ್ರದರ್ಶನ ಮಾಡಲು ತಾ. ೫ ಕ್ಕೆ ಕ. ಸಾಹಿತ್ಯ ಪರಿಷತ್ತಿನ ಮಂಗಳೂರು ಪ್ರಾಂತ ಸಮಿತಿಯ ಆಶ್ರಯದಲ್ಲಿ ಶ್ರೀ ಮುಳಿಯ ತಿಮ್ಮಪ್ಪಯ್ಯನವರ ಅಧ್ಯಕ್ಷತೆಯಲ್ಲಿ ಸಭೆ ಜರುಗಿತ್ತು.

ಉಡುಪಿ ನಗರ ಸಭೆಯ ೩೦-೧೦-೪೬ ರ ಸಭೆಯಲ್ಲಿ, ಅಧ್ಯಕ್ಷರು ಹಾಜರಿಲ್ಲದಾಗ, ಅಕಾಲದಲ್ಲಿ ಸಭೆ ಕರೆದ ಬಗ್ಗೆ ಅಧ್ಯಕ್ಷರನ್ನು ಟೀಕಿಸಿ ಗೊತ್ತುವಳಿಯನ್ನು ಪಾಸುಮಾಡಲಾಗಿತ್ತು. ೩ ಡಿಸೆಂಬರದ ಸಭೆಯಲ್ಲಿ ಅಧ್ಯಕ್ಷರು ಸಮರ್ಪಕ ವಿವರಣೆ ಕೊಡದ್ದರಿಂದ ಆ ಗೊತ್ತುವಳಿಯನ್ನು ಕಾರ್ಯಕಲಾಪ ಪುಸ್ತಕದಿಂದ ಹೊಡೆದು ಹಾಕಲಾಯಿತು.

ಕೀರ್ತನಾಚಾರ್ಯ ಶ್ರೀ ಬೇಲೂರು ಕೇಶವದಾಸರು ಉಡುಪಿಯ ಮುನಿಸಿಪಲ ಮೇನ್ ಸಾಲೆಯಲ್ಲಿ "ಹರಿದಾಸ ಸಾಹಿತ್ಯ" ವನ್ನು ಕುರಿತು ಭಾಷಣ ಮಾಡಿದರು. ಕರ್ನಾಟಕ ಸಂಘದವರು ಈ ಸಭೆಯನ್ನು ಏರ್ಪಡಿಸಿದ್ದರು.

# ಬ್ರಿಟಿಶ ಸರಕಾರ ಜಿನ್ನಾರಿಗೆ ಶರಣು ಹೋಯಿತು!

( ೪ ನೇ ಪುಟದಿಂದ ಮುಂದರಿದುದು )

ಗಡಿನಾಡುಗಳು ಘಟನಾ ಸಮಿತಿಯ ನಿಣ[illegible] ಕ್ಕೊಪ್ಪುವದು ಖಂಡಿತ. ಅವುಗಳು ಒಕ್ಕೂಟದಲ್ಲಿ ಸೇರಲು ಸ್ವತಂತ್ರವಾಗುವವೊ? ಅಥವಾ ಬ, ಕ ಗುಂಪುಗಳನ್ನೇ ಘಟನೆಯ ವ್ಯಾಪದಿಂದ ಹೊರಗಿಡಲಾಗುವದೆ? ಒಂದು ಸಂದಿಗ್ಧಾಂಶವನ್ನು ನಿವಾರಿಸಿ ಇನ್ನೊಂದು ಅದಕ್ಕಿಂತ ದೊಡ್ಡ ಸಂದಿಗ್ಧಾಂಶವನ್ನು ನಿರ್ಮಿಸಲಾಗಿದೆ. ಬೇಕೆಂದೇ ಹೀಗೆ ಮಾಡಲಾಗಿದೆಯೆಂದೂ ಹಿಂದೂ ಮುಸ್ಲಿಮರು ಪರಸ್ಪರ ಸವಲತ್ತು ಕೊಡುವಂತೆ ಮಾಡಬೇಕೆಂಬದೇ ಇದರ ಉದ್ದೇಶವೆಂದೂ (!) ಟಾಯಿಮ್ಸ ಪತ್ರಿಕೆಯ ಟೀಕಾಕಾರನ ಮತ!

ಇದೆಲ್ಲದಕ್ಕೆ ಕಳಸವಿಡಲೆಂಬಂತೆ, ಎಲ್ಲ ಸಂದಿಗ್ಧಾಂಶಗಳನ್ನೂ ಫೆಡರಲ' ಕೋರ್ಟಿಗೆ ಒಪ್ಪಿಸಬೇಕೆಂಬ ಹೊಸ ಸೂಚನೆ ಬಂದಿದೆ! ಘಟನಾರಚನೆಯನ್ನು ಅನಂತ ಕಾಲದ ವರೆಗೆ, ವಿಳಂಬಿಸುವ ಉಪಾಯವಿದು!

ಕೊನೆಯದಾಗಿ, ಕಾಂಗ್ರೆಸ್ಸು ಹಾದಿಗೆ ಬಾರದಿದ್ದರೆ ಇಡಿ ಯೋಜನೆಯನ್ನೆ ಪುನರ್ವಿಮರ್ಶಿಸಿ ಹೊಸ ಯೋಜನೆ ಹೊರಡಿಸುವೆವೆಂದು ಜಿನ್ನಾ ಸಾಹೇಬರಿಗೆ ಬ್ರಿಟಿಶ ಸರಕಾರ ಮಾತು ಕೊಟ್ಟಿದೆಯೆಂದು ವಿಶ್ವಸನೀಯವಾಗಿ ತಿಳಿದು ಬಂದಿದೆ. ಹೀಗಿದ್ದರೆ ಹಿಂದುಸ್ತಾನವನ್ನು ಪೂರ್ತಿಯಾಗಿ ಮೋಸಗೊಳಿಸಿದ ಯಶಸ್ಸು ಬ್ರಿಟಿಶ ಸಾಮ್ರಾಜ್ಯವಾದಿ ಸರಕಾರಕ್ಕೆ ದೊರಕುವದು.

**ಪ್ರತಿಕ್ರಿಯೆ**

ಬ್ರಿಟಿಶ ಸರಕಾರದ ಈ ಭೇದನೀತಿಯ ಹೇಳಿಕೆಯನ್ನು ಸ್ಕಾಟಿಶ ಹಾಗು ಆಯರಿಶ ಪತ್ರಿಕೆಗಳು ಕಟುತರವಾಗಿ ಟೀಕಿಸಿವೆ. "ಬ್ರಿಟಿಶರು ಯಾವ ತತ್ವಕ್ಕೂ ಅಂಟಿಕೊಳ್ಳದೆ ಸ್ವಾರ್ಥವನ್ನಷ್ಟೆ ಗಮನಿಸುವವರು" ಎಂಬ ಮಾತು ಇನ್ನಷ್ಟು ಸ್ಪಷ್ಟವಾಯಿತು. ಸರ್ ಸಿ. ಪಿ. ರಾಮಸ್ವಾಮಿ ಅಯ್ಯರರು ಈ ಘೋಷಣೆಯನ್ನು ಕುರಿತು "ಇದು ಪಾಕಿಸ್ತಾನವನ್ನು ಅಂಗರೂಪದಲ್ಲಲ್ಲದಿದ್ದರೂ ಸಾರರೂಪದಲ್ಲಿ ಒಪ್ಪಿಕೊಂಡಿದೆ" ಯೆಂದು ಹೇಳಿದ್ದಾರೆ. ಮುಂಬಯಿಯ ಪ್ರಸಿದ್ಧ ಮನಾಳ ಮುಂದಾಳಾದ ಸೆಟ್ಲವಾಡರಾದರೂ ಬ್ರಿಟಿಶರ ಈ ಹೇಳಿಕೆಯಿಂದ ಪರಿಸ್ಥಿತಿ ತಿಳಿಯಾಗುವ ಬದಲು ಇನ್ನಷ್ಟು ಗೊಂದಲದ್ದಾಯಿತೆಂದು ಬರೆದಿದ್ದಾರೆ. ಕಾಂಗ್ರೆಸ್ಸು ಮುಂದೇನು ಮಾಡುವದು? ಕಾರ್ಯ ಸಮಿತಿ ಮೌನ ಧರಿಸಿ, ವಿಚಾರ ನಡೆಸಿದೆ. ಗಾಂಧೀಜಿಯನ್ನು ಕೇಳದೆ ಅದು ಮುಂದೆ ಸಾಗಲಾರದು. ಬ್ರಿಟಿಶ್ ಹೇಳಿಕೆಯನ್ನು ನೋಡಿಯೂ ಜಿನ್ನಾರು ತಮ್ಮ ಮನ ಬದಲಿಸದೆ ಪಾಕಿಸ್ತಾನದ ಹಟ ಹಿಡಿದರೆ ಆಗ ಕಾಂಗ್ರೆಸ್ಸು—ಏಕೆ, ಘಟನಾ ಸಮಿತಿಯೇ–ಬ್ರಿಟಿಶ ಸರಕಾರದ ಮೇಲೆ ತಿರುಗಿಬೀಳಬೇಕಾದ ಪ್ರಸಂಗ ಬರಬಹುದು. ಫ್ರಾನ್ಸದ ಮೊದಲನೆ ರಾಜ್ಯ ಘಟನೆ ಇಂಥದೇ ಪ್ರಸಂಗದಲ್ಲಿ ಸಿದ್ಧವಾಗಿತ್ತೆಂದು ನೆನೆದುಕೊಳ್ಳಬಹುದು.

# ಆಶ್ವೀನ ಮಾಸದ ಕತೆಗಳು

( ಬೆಳಗಾವಿ ಕಲಾಮಂಟಪದಿಂದ )

ಆಶ್ವಿನದ ಹಬ್ಬ - ಹುಣ್ಣಿವೆಗಳಲ್ಲಿ ಹೋಳಿಗೆಯುಂಡ ನಾಲಿಗೆಯ ರುಚಿಯ ಸಂಗಡ ಬುದ್ಧಿಯೂ ಎಂಬತ್ತೆರಡು ಕತೆಗಳನ್ನು ಓದಿ ಸಂತಸಪಟ್ಟಿದೆಯೆನ್ನಬೇಕು. ಕಳೆದ ಆರು ತಿಂಗಳಿಗಿಂತಲೂ ಈ ತಿಂಗಳಲ್ಲಿ ಕತೆ ಹೆಚ್ಚು. ಒಂದೆರಡು ವಿಶೇಷ ಸಂಚಿಕೆಗಳು ಮೊದಲಾಗಿ ಬಂದುದೇ ಕಾರಣವು. ಅವು–

| | |
|---|---|
| ಅನುವಾದ | ೧೦ |
| ಪ್ರೇಮಕಾಮ | ೨೨ |
| ಧ್ಯೇಯವಾದಿ | ೨೦ |
| ಇತರ | ೨೧ |
| ಒಳ್ಳೆಯವು | ೯ |
| | — |
| ಒಟ್ಟು ಕತೆಗಳು | ೮೨ |

ಪ್ರೇಮಕಾಮದ ಕತೆಗಳೆಲ್ಲ ಹಳೆಯ ಏಕತಾರಿಯನ್ನೇ ಮಿಡಿಯುತ್ತುಂಟು. ಹೊಸ ಕಲೆ ಇಲ್ಲ ಹೊಸ ರಾಗವಿಲ್ಲ. ಕಥಾಪ್ರಪಂಚದಲ್ಲಿಯ ಎಂದೋ ರಾಜ್ಯದ ಒಂದು ಸಂಗತಿಯೇ ವಸ್ತು. ಕೊನೆಯು ವಿಘ್ನ ಇಲ್ಲವೆ ಲಗ್ನ. ಆದರೆ ಕುಲಕರ್ಣಿ ಬಿಂದು ಮಾಧವರ ಕತೆಯ(ಗಳ)ಸಂಬಂಧ ಒಂದು ಮಾತು ಹೇಳುವದು ಅವಶ್ಯ. ಮೋಲಿನವರು ಭಾವಜೀವಿ ಎಂಬ 'ಕತೆಯನ್ನು ಸಿನಿಮಾ ಮಾಸಿಕದಲ್ಲಿಯೂ ಕವಿಯ ಗೆಲವು ಎಂಬುದನ್ನು ಪ್ರಜಾಮತ ತಾ. ೨೦-೧೦-೪೬ ರಲ್ಲಿಯೂ ಬರೆದಿರುವರು. ಕತೆ ಒಂದೇ. ಬರೆದವರೂ ಒಬ್ಬರೇ. ಕಣ್ಣು ತಪ್ಪಿಸಲೆಂದು ಒಂದೆರಡು ಮಾತುಗಳನ್ನು ಬದಲಿಸಿರುವರು. ಮೊದಲನೆಯದು ಭಾವಜೀವಿ, ಬರೆದವರು ಕುಲಕರ್ಣಿ ಬಿಂದು ಮಾಧವ, ಕತೆಯ ಪಾತ್ರ ಕಿಟ್ಟು ಇದ್ದುದು. ಇನ್ನೊಂದು ಕವಿಯ ಗೆಲವು,ಬಿಂದು ಮಾಧವ ಮತ್ತು ಕಾಂತರಾಯ. ಕತೆಯಲ್ಲಾದರು ವಿಶೇಷ ಉಂಟೆನ್ನಬೇಕೇ? ನಾಯಕ ರಾಮು ಪ್ರೇಮತ್ಯಕ್ತನು. ಒಂದು ಊರಲ್ಲಿ ನಿಂತು ಕವಿತೆ ಬರೆಯಹತ್ತಿದನು. ಜನರು ಕೊಂಡಾಡಹತ್ತಿದರು. ಜಯ (ಪ್ರೇಯಸಿ) ಅಲ್ಲಿಗೆ ಬಂದಳು. ಪತಿಯೆಂದು ಸಂಬೋಧಿಸಿದಳು. ಕಾಡಿದಳು. ರಾಮು ನಿರಾಕರಿಸಿದ. ಗದ್ದಲದೊಳಗಿಂದ ತಪ್ಪಿಸಿ ಓಡಿದ. ಜನರು ಏನೋ ಎಂದರು. ಇಂದಿಗೆ ಅವನು ಕವಿತೆ ಬರೆಯುವದನ್ನು ಬಿಟ್ಟ. ಹೋಗಲಿ. ರಾಮುನ ಉದಾತ್ತತೆಯನ್ನು ಮೆಚ್ಚಿಕೊಳ್ಳೋಣ! ಆದರೆ ಹೀಗೆ ಒಂದಿಷ್ಟು ತಿರುವು ಮುರುವು ಮಾಡುವದು ಸಾಹಿತ್ಯದಲ್ಲಿ ಕಳ್ಳತನವಲ್ಲವೇ?

ಕರ್ನಾಟಕ ಬಂಧುವಿನಲ್ಲಿಯ ಪಿ. ಆರ್. ಪಟ್ಟಣರ ಪುಷ್ಪಾ ಕತೆಯಲ್ಲಿಯ ಪುಷ್ಪಾ ತಂದೆಯ ಮಾತು ಮೀರಿ ನಡುರಾತ್ರಿಯಲ್ಲಿ ಅದೂ ಲಗ್ನ ಪೂರ್ವದಲ್ಲಿ ತನ್ನ ಪ್ರಿಯಕರನ ಮನೆಗೆ ಓಡಿ ಹೋಗುವದು ಅಭಿಸಾರಿಕೆಯನ್ನು ಸಹ ನಾಚಿಸುವಂತಹದು. ಮತ್ತು ಜಿ. ಸಿ. ಎಸ್. ಪಾಟೀಲರ ಸೇಡು ಕತೆಯು ಅಶಕ್ಯ ಕೋಟಿಯೊಳಗಿನದು—ನಿರ್ಗತಿಕಳಾದ ಪ್ರೇಮಳು ಮನೆಗೆ ಭಿಕ್ಷೆಗೆ ಬರುವಳು. ಹಿಂದಿನ ಪ್ರೇಮಭಂಗದ ಸೇಡು ತೀರಿಸಿಕೊಳ್ಳಬೇಕೆಂದು ತಿರಸ್ಕರಿಸಿ ಕಳಿಸಿದೆ. ಅವಳು ಹೋದಳು. ನಾನು (ಕತೆಗಾರ) ಸತ್ತೆ. ಮುಂದೆ ಪ್ರೇಮಳಿಗಾಗಿ ಬರೆದಿಟ್ಟ ಮೃತ್ಯುಪತ್ರವನ್ನು ಕೋರ್ಟು ಸ್ವೀಕರಿಸಿ ಅದರಂತೆ ಅಮಲಬಜಾವಣೆ ಮಾಡಿತು—ಎಂದು ನಾನು ಸತ್ತಮೇಲೆ ಹೇಗೆ ಹೇಳಬಲ್ಲೆ! ಉಳಿದ ವಾಣಿಯಲ್ಲಿಯ ವೀಣಾವಿತಾನ, ಜೀವನದಲ್ಲಿಯ ವ್ಯಭಿಚಾರಿ, ಪ್ರಗತಿಯಲ್ಲಿಯ ಚಿರದಯಿ, ವಾಹಿನಿಯಲ್ಲಿಯ ಹಮೀದನ ನಿರ್ಧಾರ ಓದಲರ್ಹವಾದವುಗಳು.

ಧ್ಯೇಯವಾದಿ ಕತೆಗಳಲ್ಲಿಯ ಪ. ಸು. ಭಟ್ಟರ ಸ್ವಾಮಿ, ವಿಶ್ರಾಮರ ಟ್ರಂಕಿನಲ್ಲಿ, ತ. ರಾ. ಸು. ರವರ ರಲೂಸಿಯ ಪ್ರಯಾಣ ಒಳ್ಳೆಯವಾದವುಗಳು. ಎಂ. ವಿ. ಸೀತಾರಾಮಯ್ಯರ ಗೌರಿಯ ಸಾವು ಮತ್ತೂ ಉತ್ತಮವಾದುದು. ಕತೆ ಹೀಗಿದೆ- ಶಂಕರ ಗೌರಿಯ ಮೇಲೆ ಅಧಿಕ ಪ್ರೇಮವುಳ್ಳವ. ಸತ್ತಳೆಂದು ತಂದೆ ಫೋನು ಮಾಡುವರು. ಹೋಗಿ ಶಂಕರನು ಬಹಳ ಅತ್ತನು. ಕೊನೆಗೆ ಹೂಳಿದರು. ಸಮಾಧಿಯ ಮೇಲೊಂದು ಹೊಂಗೆ ಮರ. ಅದು ಈಗ ಹೂಗಳಿಂದ ತುಂಬಿದೆ. ಗೌರಿಯ ಪ್ರೇಮ ಹೂಗಳ ಮಕರಂದದಿಂದ ನಮ್ಮನ್ನು ಸ್ವಾಗತಿಸುವದು. ಗೌರಿಯೆಂದರೆ ಮನೆಯ ಎಮ್ಮೆ! ಎಮ್ಮೆ ಎಂಬುದು ಕತೆ ಮುಕ್ಕಾಲು ಪಾಲು ಓದಿದರೂ ತಿಳಿಯದು. ಸುಂದರವಾಗಿ ಬರೆದಿರುವರು. ಉತ್ತರ ಕರ್ನಾಟಕದಲ್ಲಿ "ರಾಣಿ ಸತ್ತಳು" ಎಂಬುದೊಂದು ಲಾವಣಿ ಪ್ರಸಿದ್ಧವಿದೆ. ರಾಣಿ ಅಂದರೆ ಅಗಸನ ಕತ್ತೆ. ಲಾವಣಿಯ ತುಂಬೂ ರಾಣಿ ಎಂದರೆ ಅರಸನ ಹೆಂಡತಿಯೆಂದೇ ಕಣ್ಣು ಮುಚ್ಚಾಲೆ ಇದೆ.

ಅಂತರಂಗದಲ್ಲಿಯ ಚಂದ್ರಶೇಖರ ರಬಕವಿಯವರ ಸಂಪಾದಕರು ಉತ್ತಮವಾದ ವಿಡಂಬನಾತ್ಮಕ ಕತೆಯು. ಅಲ್ಲಿ ಇಂದಿನ ವೃತ್ತಪತ್ರಿಕೆಗಳ ಸ್ಥಿತಿ, ಲೇಖಕರ ಗತಿ, ಲೇಖನಗಳ ಮತಿ, ಜಾಹಿರಾತುದಾರರ ಇತಿ ಮುಂತಾದವುಗಳನ್ನು ಒಂದು ಹಿಡಿಯಲ್ಲಿ ಹಿಡಿದು ಒಂದೊಂದಾಗಿ ಹೊರತೆಗೆದು ಜಾದು ಆಡಿದಂತೆ ಹೇಳಿರುವರು. ಮಯೂರದಲ್ಲಿಯ ಅರ್ಚಿಕ ವೆಂಕಟೇಶರ ಪ್ರತ್ಯಕ್ಷ ದರ್ಶನವು ಕಿರುಗತೆಯಾಗದೆ ಬಂದು ಚಿತ್ರಣವಾದರೆ ಸೊಗಸು. ಕಂಗಾನ ಅನಾಥೆಯ ವರ್ಣನೆಯೆ ಅದರ ವಸ್ತು. ಅವಳನ್ನು ಕಂಡು ತಮಗಾದ ಉದ್ವೇಗವನ್ನು ವರ್ಣಿಸುವ ಮುಂದೆ ಲೇಖಕರು ಸಮಾಜವನ್ನು ನಿಷ್ಕಾರಣವಾಗಿ ಹಳಿದಿರುವರು. ಕ್ರೌಂಚಪಕ್ಷಿಯ ಮರಣದಿಂದ ವಾಲ್ಮೀಕಿಋಷಿಯು ರಾಮಾಯಣವನ್ನು ಬರೆದರೆ ಬೆಳವನ ಮರಣದಿಂದ ದೊಡ್ಡೇರಿ ವೆಂಕಟಗಿರಿ ರಾಯರು ಬೆಳವನ ಬೇಟೆ ಎಂಬ ಕತೆಯನ್ನು ಕನ್ನಡ ಜನತೆಗೆ ಒದಗಿಸಿರುವರು. ವಿಷಾದದ ಸಂಗತಿಯು. ಅಥವಾ ಅಲ್ಲಿಯ ದುರಂತ ಘಟನೆಯಿಂದ ಋಷಿಗಳ ವಿಶಾಲ ಹೃದಯದಿಂದ ರಾಮಾಯಣವು ಹೊರಟರೆ ಇಂದಿನ ಸಾಹಿತಿಗಳಿಂದ ಬೆಳವನ ಮರಣ ಒಂದು ಅಲ್ಪ ಕತೆಯನ್ನು ಹೊರಡಿಸೀತು! ಎಂದು ಅಣಕವಾಡಿರುವರೋ? ಇದು ನಿಜವಾದರೆ ಸಿಂಪಿ ಲಿಂಗಣ್ಣರ ರಸಿಕರ ನೋಳದಲ್ಲಿಯೂ ಒಂದಿಷ್ಟು ಇದೆ ಎನ್ನಬೇಕು.

## ಆಶ್ವಿನ ಪಟ್ಟಿ

### ಯಾರ ಟಿಕ್ಕಿ ಯಾರಿಗೆ?

ಲೇ. ನರಸಿಂಹ ಜೋಸಿ. ಜಯಂತಿ

ನೀಲವ್ವನ ಮಗಳಾದ ಮಲ್ಲವ್ವನನ್ನು ಗಂಡ ಬಸಲಿಂಗನು ಟಿಕ್ಕಿ ತಾರದ್ದರಿಂದ ಬಿಟ್ಟ. ಅಲ್ಲದೆ ಸೋಡಚೀಟಿಯನ್ನು, ನೋಟೀಸನ್ನು ಕೊಟ್ಟ. ನಾನು ಮನೆಗೆ ಬಂದೆ. ನೋಟೀಸನ್ನು ಬೇರೆಬಗೆಯಾಗಿ ನೀಲವ್ವನಿಗೆ ಓದಿಹೇಳಿದೆ. ಮತ್ತು ಮನೆಯ ಟಿಕ್ಕಿಯನ್ನು ಹಲಕರಣಿ ಹಿರಿಯರ ಕೈಯಲ್ಲಿ ಪಂಚರೆಂದಿಟ್ಟು ಬಸಲಿಂಗನು ಸಮಾಧಾನವಾಗುವಂತೆ ಮಾಡಿದ ಕರೆಯಬಂದನು. ಆಗ ಮೂಲ ಟಿಕ್ಕಿ ಹೊರಬಂದಿತು. ಗಂಡಹೆಂಡರು ಒಂದಾದರು. ಕತೆಗಾರರ ಔದಾರ್ಯವನ್ನು ಹೊಗಳಬೇಕು. ಭಗ್ನಸಂಸಾರವಾಗಬಂದ ದಂಪತಿಗಳಲ್ಲಿ ಅನುಕೂಲಸ್ಥರು ಉದಾರತೆಯನ್ನು ತಳೆದು ಇಂಥ ಪರೋಪಕಾರಗೈದರೆ ಸಮಾಜಕ್ಕೆ ಆದರ್ಶವೇ ಸರಿ. ಇಂಥದೇ ಔದಾರ್ಯವು ಮೂಲವಾದ ಅವಳ ತಮ್ಮ ಎಂಬ ವಾಹಿನಿಯ (ತಾ. ೧೪-೪-೪೬ರಲ್ಲಿ ಅನಂತ ಕಾಣೇಕರರ ಮರಾಠಿಯಿಂದ ಅನುವಾದಿಸಿದ) ಕತೆಯಲ್ಲಿ ಕಾಣಬಹುದು.

### ಬಾಡು--ಸೇಸಿ

ಕೆ. ದೊಡ್ಡಣ್ಣ ಸೆಟ್ಟಿ. ಅಂತರಂಗ

ಬಾಡು–ಸೇಸಿ ಗಂಡಹೆಂಡರು. ಬಾಡು ಘಟಿಂಗನಾಗಿ ಊರು ಬಿಟ್ಟ. ಸೇಸಿ ನಿರ್ಗತಿಕಳು. ಉಪಜೀವನ ಭಾರವಾಯಿತು. ಆತ್ಮಹತ್ಯೆಗೆ ಮನೆ ಬಿಟ್ಟು ಓಡಿದಳು. ಮಗುವಿನ ಆಕ್ರಂದನ. ರೈರು ಮಗುವನ್ನೆತ್ತಿ ಸೇಸಿಯನ್ನು ಹುಡುಕಹೊರಟರು. ಓಡುವ ಸೇಸಿ ಕಂಡಳು. ಕೂಗಿದರು. ಕೇಳಿ ಸೇಸಿಯ ಮಾತೃಹೃದಯ ಜಾಗ್ರತಗೊಂಡಿತು. ತಿರುಗಿದಳು ರೈರಕೃಪಾಛತ್ರದಲ್ಲಿ ಮಗು ತಾನು ನೆಮ್ಮದಿಯಾದರು.

ಸ್ತ್ರೀಯು ಎಂಥದೇ ಸಂಕಟದಲ್ಲಿರಲಿ, ಗಂಡ ಸತ್ತು ಬಿದ್ದಿದ್ದರೂ ಸರಿ, ಎದೆಗೂಸಿಗೆ ನೊಲೆಗೊಡುತ್ತ ಹಣೆಯನ್ನು ಚಚ್ಚಿಕೊಂಡು ಆಕ್ರೋಶಪಡುವ ತಾಯಂದಿರ ನೂರುಚಿತ್ರಗಳನ್ನು ಸಮಾಜದಲ್ಲಿ ನೋಡಬಹುದು. ಸ್ತ್ರೀಯಲ್ಲಿ "ಅದಃ ಪೂರ್ಣಂ ಇದಃ ಪೂರ್ಣಂ" ಎಂಬ ಒಂದು ಅದ್ವಿತೀಯ ಗುಣವೆಂದರೆ ಮಾತೃಹೃದಯ. ಕತೆಯಲ್ಲಿ ಇದುವೆ ರೂಪಗೊಂಡಿದೆ. ಬೇಂದ್ರೆಯವರ ಮಗುವಿನ ಕೂಗು, ಶಿಲಾದೇವಿ ವಾಳ್ವೇಕರರ (ಕರ್ಮವೀರ) ರಂಗಣ್ಣಿ ಈ ಮೊದಲು ಇದನ್ನೇ ಪ್ರತಿಪಾದಿಸಿವೆ.

### ಕಾಳಿ

ಚದುರಂಗ–ವಾಹಿನಿ(ವಿಶೇಷ ಸಂಚಿಕೆ)

ತಮ್ಮಯ್ಯ—ನರಸಿ ಗಂಡಹೆಂಡರು. ಮಿಲ್ಲಿನಲ್ಲಿಯ ಕೂಲಿಗಳು. ಮ್ಯಾನೇಜರ ನರಸಿಯ ಮೇಲೆ ಕೈಮಾಡಿದ. ಇಬ್ಬರು ಕೂಡಿಬಡಿದರು. ಅವನ ಅವಮಾನ. ದಂಪತಿಗಳು ಡಿಸ್‌ಮಿಸ್ ಇನ್ನೊಂದು ಮಿಲ್ಲಿನಲ್ಲಿ ಕೆಲಸ ದೊರೆಯಲಿಲ್ಲ ಉಪವಾಸ. ನಿಂಗಯ್ಯನ ಸಹಾಯದಿಂದ ಮಿಲಿಟರಿ ಸೇರಿದ. ಬರ್ಮಾ ಪ್ರವಾಸ. ಯುದ್ಧ ಮುಗಿಯಿತು. ಊರಿಗೆ ಬಂದ. ತಂದೆಗೆ ಮಗಳು ಕಾಳಿಯನೆನಪು. ನಾಲ್ಕಾರು ವರುಷದ ಅವಳ ಬಾಲ್ಯ, ಬೆಳವಣಿಗೆ, ರೂಪ, ನಯ ಮುಂತಾದವುಗಳಿಗಾಗಿ ಏನೇನೋ ಕೊಂಡ. ಊರು ಸೇರಿದ. ಹೆಂಡತಿ ಬರಮಾಡಿಕೊಂಡಳು. ಉಣಬಡಿಸಿದಳು. ಕುಶಲ ಪ್ರಶ್ನೆ ಕೇಳಿದಳು. ನಡುವೆ ತಮ್ಮಯ್ಯ ಸಾವಿರಸಾರೆಯಾದರೂ ಕಾಳಿಯನ್ನು ಸ್ಮರಿಸಿರಬೇಕು. ನರಸಿ ಮನೆವಾರ್ತೆಯ ಮತ್ತೊಂದು ನೆಳವಿಗೆ ಎಳೆದೊಯ್ಯುತ್ತಿದ್ದಳು. ಕಡೆಗೆ ರಾತ್ರಿ ಗಂಡನ ಪಾದಸೇವೆಯಲ್ಲಿ ಮಗ್ನಳಾದಳು. ಗಂಡ ಕಾಳಿ! ಎಂದನು. ಸತ್ತಳೆಂದು ಉತ್ತರಿಸಿ ಕಣ್ಣೀರಿಟ್ಟಳು.

ಉತ್ತಮವಾದ ಕತೆಯು. ತಮ್ಮಯ್ಯನ ಸಾವಿರ ಉತ್ಕಟ ಇಚ್ಛೆಗಳಿಗೆ ಸೀಮಾತೀತವಾದ ಸಂಕಟವನ್ನು ಸಂಯಮಿಸಿ ಗಂಡನನ್ನು ಸತಿಭಕ್ತಿಯಿಂದ ತೃಪ್ತಿಪಡಿಸಿ ಸತ್ತಳೆಂದು ಹೇಳುವದು ಎಂಥ ಉತ್ಕೃಷ್ಟ ಗುಣವು! ಪುರುಷಸ್ವಭಾವವನ್ನರಿತ ಸಂಸಾರ ಸುಖದರಾಜರತ್ನವೇ ಹೀಗೆ ನಡೆದೀತು. ನರಸಿಯ ಪಾತ್ರ ಅದ್ವಿತೀಯವಾದುದು. ಆದರೆ ಕತೆಗೆ ಕ್ಷೇತ್ರ, ಪಾತ್ರ, ವಿಷಯ ಅಧಿಕವಾಗಿ ನೀಳ್ಗತೆಯೆನಿಸುವದು.

### ಆದರ್ಶ

ಯಂ. ಎಸ್. ಗುಂಡೂರಾವ. ಸುಬೋಧ.

ಕತೆಯ ವಸ್ತು ಪುನರ್ವಿವಾಹ. ರಾಜು, ಲೀಲೂ ಸ್ನೇಹಿತರು. ರಾಜು ಲೀಲೂನ ರೂಪಿಗೆ ಮರುಳಾಗುವ. ಆದರೆ ಜಾತಕ ಸರಿಯಿಲ್ಲವೆಂದು ಮದುವೆಯಾಗುವದಿಲ್ಲ. ಲೀಲು ವಿಧವೆಯಾಗಿ ಮತ್ತೆ ಕಲಿಯಬರುವಳು. ಇಬ್ಬರ ಪರಿಚಯ. ದೇಶಸೇವೆಯಲ್ಲಿ ಧುಮುಕಿ ಆದರ್ಶ ಜೀವನವನ್ನು ಸಾಗಿಸುವರು. ಆಗ ಅವರ ಸಂಭಾಷಣೆ, ರೀತಿ, ನಡತೆಯನ್ನು ನಾವು ಮೆಚ್ಚಬೇಕು. ಇನ್ನು ಮುಂದಾದರು ಮದುವೆಯಾಗಬಾರದೇ? ಎನ್ನುವಂತೆ ಪವಿತ್ರವಾಗಿ ಬದುಕುವರು. ವಾಚಕರು ಕುತೂಹಲ ಶಿಖರಕ್ಕೇರಿ ಮದುವೆಯಾಗಿರಿ ಎಂದು ಆಶೀರ್ವದಿಸಲು ಕೈಎತ್ತಿದ ಸಮಯಕ್ಕೆ ಮದುವೆಯಾಗುವರು. ಸಂಗತಿಯು ಹಳೆಯದೆನಿಸಿದರೂ ಕಲಾಮಯವಾಗಿ ಹೆಣೆದಿರುವರು. ಪುನರ್ವಿವಾಹಕ್ಕೆ ಇಂಥ ಆದರ್ಶ ಬೇಕೇ? ಎಂದು ಕೇಳಿದರೆ ಕತೆಗಾರರು ಏನು ಹೇಳುವರೋ!

### ಇಂಟರವ್ಯೂ

ಬಿ. ಎಸ್. ವೆಂಕಟರಮಣಸ್ವಾಮಿ
ಮೈಸೂರ ವೈಶ್ಯಪತ್ರಿಕೆ

ನಾನು ಕಡೂರಕ್ಕೆ ಹೊರಟಿದ್ದೆ. ಅದೇ ಡಬ್ಬಿಯಲ್ಲಿ ಇನ್ನೊಂದು ಕುಟುಂಬ. ಅವರಿಗೂ ಕಡೂರಿಗೆ ಹೋಗಬೇಕಿತ್ತು. ನಡುವೆ ಡಬ್ಬಿಯಲ್ಲಿ ಜಗಳಉದ್ಭವಿಸಿತು. ಆ ಕುಟುಂಬದ ತಾಯಿ ಮತ್ತು ಒಬ್ಬ ಹರೆಯದ ಹೆಂಗಸು. ನನ್ನನ್ನು ಸಾಕಷ್ಟು ನಿಂದಿಸಿದರು. ಹರೆಯದವಳು ಬಡಿಯುವದೊಂದು ಉಳಿದಿತ್ತು. ಕಡೆಗೆ ಕಡೂರ ಬಂದು ಇಳಿದೆ. ಚಿಕ್ಕಪ್ಪ ನನ್ನನ್ನು ಬರಮಾಡಿಕೊಂಡನು. ಆ ಫೋಟೊ ಹರೆಯದವಳನ್ನು ತೋರಿಸಿ "ಆಕೆ ನಿನ್ನ ಭಾವಿ ಪತ್ನಿ ಒಪ್ಪಿಗೆಯೆ?" ಎಂದು ಕೇಳಿದನು. ನಾನು ಉತ್ತರಿಸದೆ ದಾವಣಗೇರಿಗೆ ಓಡಿದೆ.

ಕತೆಯು ಸ್ವಾರಸ್ಯವಾದುದು. ಹೊಟ್ಟೆಹಿಡಿದು ನಗಬೇಕು. ಪಾಪ, ಭಾವಿಪತಿ ಪಾರಾದ. ಇಲ್ಲದಿದ್ದರೆ ಆ ಜಗಳಗಂಟಿಯನ್ನು ಕಟ್ಟಿಕೊಂಡು ಇಡೀ ಜೀವನವನ್ನು ಟಗ್ ಅಫ್ ವಾರದಂತೆ ನಡೆಸಬೇಕಿತ್ತು.

### ಹೆಂಗಸು

ಎಂ. ಗೋಪಾಲಕೃಷ್ಣ ಉಷಾ

ರಾಯರು ತೀರ ಕಠೋರ ಸ್ವಭಾವದವರು. ಹೆಂಡತಿ ರತ್ನ ಉಂಡರೆ-ಉಪವಾಸ ಬಿದ್ದರೆ ಇಲ್ಲವೆ ಉಟ್ಟರೆ-ತೊಟ್ಟರೆ ಏನಾದರು ಸರಿ ಸಹನವಿಲ್ಲ. ಎಲ್ಲದಕ್ಕೂ ಕಠೋರತೆ, ಬೇಟೆ-ಕೂಟದಲ್ಲಿ ಸಹ ಸಿಂಹ ಗರ್ಜನೆಯೇ! ಹೆಂಡತಿ ಬೇಸತ್ತು ಒಂದು ದಿನ ಏನೋ ನಿರ್ಧಾರ ಮಾಡಿದಳು. ಇನ್ನು ಆದರಿಸಬೇಕು. ಮಗನು–ಅಪ್ಪ ಬಂದನೆಂದು ಹೇಳಿದ. ಹೆಂಡತಿಯು ಗವಿಯನ್ನು ಸೇರಿ ತೆಪ್ಪಗಾದಳು.

ಕತೆಯು ಹಠಾತ್ತಾಗಿ ಮುಗಿದಂತಿದೆ. ಶಿಕ್ಷ ರತ್ನಳಿಗೆ ಇದೇ ಸಾವಾದರೆ ನಾವು ಕನಿಕರಪಡಬೇಕು. ರಾಯರನ್ನು ಆಕೆಗೂ ಹೆಚ್ಚಾಗಿ ಸಾವಿರ ಸಾರೆ ಶಪಿಸಬೇಕು.

### ಅಂದಿನ ಆ ಪ್ರಣಯ ಯಾತ್ರೆ

ಆನಂದ ರೈ ಛಾಯಾ

ಜಯ, ಲಕ್ಷ್ಮಿ ಪ್ರೀತಿಯ ಗಂಡಹೆಂಡರು. ಗಂಡ ಹೆಂಡತಿಯ ೬೦೦ ರೂ. ತೆಗೆದುಕೊಂಡು ಭೂಗತನಾದ. ಕಡೆಗೆ ಸಿಕ್ಕ. ೧॥ ವರುಷ ಸಶ್ರಮ ಶಿಕ್ಷೆ. ಹೆಂಡತಿ, ಅಪ್ಪ ಭೆಟ್ಟಿಗೆ ಬಂದರು. ಜಯ ಹೆಂಡತಿಯನ್ನು ದುರುಗುಟ್ಟಿ ನೋಡಿದ. ಪಾಪ! ಹೆಂಡತಿ ಸಹ ಮರುದಿನ ಸತ್ಯಾಗ್ರಹ ಮಾಡಿ ತುರಂಗ ಸೇರಿದಳು.

ಗಂಡನ ಕಣ್ಣಲ್ಲಿಯ ಆ ಕಿಡಿಯನ್ನು ನೋಡಿ ಅವನ ಇಚ್ಛೆಯಂತೆ ತುರಂಗ ಸೇರಿದ ಲಕ್ಷ್ಮಿಯು ಒಳ್ಳೆಯ ಪಾತ್ರ. ಆದರೆ ಇದು ಜಯನ ದುರಾಗ್ರಹವಲ್ಲವೇ?

### ಹೊತ್ತಾಗಿ ಬಂದ

ಬಿ. ರಾಮಕೃಷ್ಣಾಚಾರ್ಯರು ಧುರೀಣ

ತಿರುಮಲರಾಯರು ತಮ್ಮ ಮಗಳಾದ ತಾರಾಳನ್ನು ನರ್ಸಪ್ಪನ ಮಗನಾದ ರಾಜಾರಾಮನಿಗೆ ತೋರಿಸಬೇಕೆಂದು ಕರೆ ಕಳುಹಿದರು. ರಾಜ ಬಂದನು. ಬೀಗ ಮನೆಗೆ ಕರೆದುತಂದನು. ಹುಡುಗಿಯನ್ನು ತೋರಿಸಿದರು. ರಾಜನಿಗೆ ಇದೆಲ್ಲ ವಿಚಿತ್ರ. ಕಡೆಗೆ ತಾನಾರೆಂದು ಹೇಳಿದನು. ಆದರೂ ತಿರುಮಲರಾಯರು ಒಪ್ಪಿದರು. ಹುಡುಗಿಯೂ ರಾಜನ ಮನಸಿಗೆ ಬಂದಿದ್ದಳು. ಇನ್ನು ಹೊರಡಬೇಕು. ಭಾವಿ ಅಳಿಯ ರಾಜಾರಾಮ ಬಂದನು. ತಂದೆಯ ಹೆಸರು, ಅಳಿಯಂದಿರ ಹೆಸರು, ಒಂದೇ ಗಾಡಿಗೆ ಬರುವದು ಇಷ್ಟೆಲ್ಲ ಗೊಂದಲಕ್ಕೆ ಕಾರಣವಾಯಿತು. ಇದರಿಂದ ಪ್ರಥಮ ವರನು ಹೊತ್ತಾಗಿ ಬಂದವನಾದನು.

ಕತೆಯು ಒಳ್ಳೆಯದೆನಿಸಿದರೂ ಇಷ್ಟೆಲ್ಲ ಆಕಸ್ಮಿಕ ಕೂಡುವದೆಂತು? ಅರಿಯದ ರಾಜನು ಸಮ್ಮತಿಸಿದನು ಹೇಗೆ? ಶ್ರೀಮತಿ ಗುಣ ಉದ್ಯಾವರರು ಅನುವಾದಿಸಿದ ಟಪಾಲದ್ವಾರ ಪ್ರೇಮವನ್ನು ಅಂಶದಿಂದ ಹೋಲುವದು.

### ಪ್ರೇಮ ಪತ್ರಗಳು

ಶ್ರೀಕೃಷ್ಣ ಪಾಟೀಲ ಕರ್ಮವೀರ

ಗಾಯತ್ರಿ ಕಾಲೇಜದ ವಿದ್ಯಾರ್ಥಿನಿ. ರೂಪ, ವಿದ್ಯೆಯಿಂದ ಪೂರ್ಣಳು. ಅವಳ ಪ್ರೇಮಕ್ಕಾಗಿ ರಸ ಋಷಿಯಾದ ವಿಷ್ಣುಚರಣ, ಕುಬೇರನಾದ ಧನಂಜಯ ಮತ್ತು ಕಾಮನಾದ ಶಿಶುಮಾರನು ಆತುರಪಡುವರು. ನೂರೆಂಟು ಪ್ರೇಮಪತ್ರಗಳನ್ನು ಬರೆದು ಯಾಚಿಸುವರು. ಮೂವರಲ್ಲಿಯ ಅಧಿಕ ಗುಣವನ್ನು ಗಾಯತ್ರಿಯು ಮೆಚ್ಚುವಳು. ಇವನೇ ಒಳ್ಳೆಯವನೆಂದು ನಿರ್ಧರಿಸಲು ಶಕ್ತಿ ಸಾಲದು. ಈ ತ್ರಿವೇಣಿ ಸಂಗಮದಲ್ಲಿ ಸಿಕ್ಕು ಕಕ್ಕಾವಿಕ್ಕಿಯಾಗುವಳು. ಕೊನೆಗೆ ಯಾರಾದರು ಸರಿ ಎಂದು ದೃಢಪಡಿಸಿಬಿಡುವಳು. ಸಂತೋಷಿಸುವಳು. ಆದರೆ ಕಾಲೇಜದ ಒಂದು ಅಪಘಾತದಲ್ಲಿ ಮೂವರೂ ತೇರ್ಗಡೆ ಹೊಂದುವದಿಲ್ಲ. ಅವರಲ್ಲಿಯ ಪುರುಷ ನ್ಯೂನತೆಯು ಕಂಡುಬರುವದು. ಈ ಅಲ್ಪನ್ಯೂನತೆಯನ್ನು ಸಾಧಿಸಿ ರಹಿಮನು ಗಾಯತ್ರಿಯ ಅಧಿಪತಿಯಾಗುವನು.

ಕತೆಯು ಅತ್ಯುತ್ತಮವಾದುದು. ಪಾತ್ರ, ಭಾಷೆ, ಸಂವಾದ, ಮನೋವಿಶ್ಲೇಷಣದ ಸೂಕ್ಷ್ಮ ಸನ್ನಿವೇಶ ನಾವೀನ್ಯಮಯವಾದವುಗಳು. ನಮ್ಮ ತರುಣರಿಗೆ ವಿಚಾರಪ್ರಚೋದನದ ಒಂದು ಸುಂದರ ದೃಷ್ಟಾಂತವು.

ಅಶ್ವಿನ ಮಾಸದಲ್ಲಿ ಇದಕ್ಕೇ ಪಟ್ಟಗಟ್ಟಬೇಕು.

# ಭವಿಷ್ಯ

ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

## ಡಿಸೆಂಬರ ೧೬ ರಿಂದ ೨೨ ರ ವರೆಗೆ

### ಮೇಷ

ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲ. ಮಕ್ಕಳಲ್ಲಿ ಪ್ರತಿಯೊಬ್ಬರ ವಯಸ್ಸು ಮತ್ತು ಶರೀರ ಪ್ರಕೃತಿಗನುಸಾರವಾಗಿ ಉನ್ನತಿ. ಆದರೆ ತಮ್ಮ ತಮ್ಮಲ್ಲಿಯ ಕಲಹದಿಂದ ಪ್ರಾಪಂಚಿಕ ಸ್ವಾಸ್ಥ್ಯ ಕಡಮೆಯೇ. ಉದ್ಯೋಗದಲ್ಲಿ ಲಾಭ ಕಿಂಚಿತ್ ಕಡಮೆ. ಆದರೆ ಪ್ರಗತಿ ಮತ್ತು ಪ್ರತಿಷ್ಠೆಗಳಲ್ಲಿ ಹೆಚ್ಚಳ. ಸ್ಥಾವರದಲ್ಲಿ ಸ್ವಲ್ಪ ಹಾನಿ. ಬಂಧುವರ್ಗದವರು ನಿಮ್ಮ ವಿರುದ್ಧ ಬಹಳ ಕೈವಾಡ ನಡೆಸುವರು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯಪಕ್ಷಗಳಲ್ಲಿ ಸಮಾನ ಸ್ಥಿತಿ. ಕುತರ್ಕ ಮತ್ತು ಹೀನಬುದ್ಧಿಯ ವಿಚಾರ ಬಹಳ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಅಶ್ವಿನಿಯ ೨ ಮತ್ತು ಭರಣಿಯ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೮, ೧೯, ೨೦ ಅನುಕೂಲ.

### ವೃಷಭ

ನಿಮ್ಮ ಪ್ರಕೃತಿಗೆ ಮತ್ತು ಹೆಂಡತಿಯ ಪ್ರಕೃತಿಗೆ ಬಹಳ ತೊಂದರೆ. ಮಕ್ಕಳಲ್ಲಿ ಸ್ವಲ್ಪ ಉನ್ನತಿ. ಆದರೂ ಉಳಿದ ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಕಡಮೆ ಉದ್ಯೋಗದಲ್ಲಿ ಪ್ರಗತಿ ಅನುಕೂಲವೆ. ಆದರೆ ಆ ಮಾನದಿಂದ ಪ್ರತಿಷ್ಠೆ ಮತ್ತು ಲಾಭ ಬಹಳ ಕಡಮೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಹಿನ್ನೆಡುವದು. ಪ್ರವಾಸ ಮತ್ತು ಪತ್ರವ್ಯವಹಾರವೂ ಭೆಟ್ಟಿಗಿಂತ ಅನುಕೂಲ. ಮಿತ್ರತ್ವದಲ್ಲಿ ವಿರೋಧ. ಕೃತ್ತಿಕೆಯ ಕೊನೆಯ ೨ ಮತ್ತು ರೋಹಿಣಿಯ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೬, ೧೭, ೨೨ ಅನುಕೂಲ.

### ಮಿಥುನ

ಪ್ರಕೃತಿ ಸಾಧಾರಣವೆ. ಹೆಂಡತಿಗೂಡ ಮೇಲಿಂದ ಮೇಲೆ ಮತಭೇದ ಮತ್ತು ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ತೊಂದರೆ ವಿಲಕ್ಷಣ. ಸ್ಥಾವರದಲ್ಲಿ ಅನಪೇಕ್ಷಿತ ಥಾನಿ. ಆದರೆ ಮಕ್ಕಳಲ್ಲಿ ಕೆಲ ಭಾವೀ ಉನ್ನತಿಯ ವಾತಾವರಣ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಧಾರಣವೆ. ಆದರೆ ಆ ಮಾನದಿಂದ ದ್ರವ್ಯಲಾಭ ತುಂಬ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ನಿಮ್ಮದೆ ತಪ್ಪಿನಿಂದ ಗೊಂದಲ. ಪ್ರವಾಸಾದಿ ಕೆಲಸ ಬಹಳ ತೊಂದರೆಯದು. ಮಿತ್ರಸುಖ ಉತ್ತಮ. ಆದರೆ ಆರಿದ್ರೆಯ ಕೊನೆಯ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೮, ೧೯, ೨೦, ಅನುಕೂಲ.

### ಕರ್ಕ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೂ ಪ್ರಾಪಂಚಿಕ ತೊಂದರೆ ವಿಪರೀತ. ಪ್ರತಿಯೊಬ್ಬನಿಗೆ ತನ್ನ ತನ್ನ ಜಾಣತನದ ದುರಭಿಮಾನ ವಿಪರೀತ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಸಾಧಾರಣವೆ. ಆದರೆ ಪ್ರತಿಷ್ಠೆ ಉತ್ತಮ. ಧಂದೆದವರಿಗಿಂತ ನೋಕರದಾರರಿಗೆ ಅನುಕೂಲತೆ ಹೆಚ್ಚು. ಮಿತ್ರತ್ವದಲ್ಲಿ ವಿರೋಧ ಸ್ಥಾವರದಲ್ಲಿ ಮಹತ್ವದ ವಿಷಯ ಯಶಸ್ವಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಪುಷ್ಯದ ೨ ನೆ ಮತ್ತು ಆಶ್ಲೇಷದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೬, ೧೮, ೨೧ ಅನುಕೂಲ.

### ಸಿಂಹ

ಪ್ರಕೃತಿ ಉತ್ತಮ. ಆದರೆ ಸ್ತ್ರೀ ಸುಖದಲ್ಲಿ ಸ್ವಲ್ಪ ವಿರಸ. ಬಂಧುವರ್ಗದವರಲ್ಲಿ ಇಲ್ಲವೆ ಮಕ್ಕಳಲ್ಲಿ ಉನ್ನತಿ. ಆದರೆ ಮಿತ್ರರಲ್ಲಿ ಒಬ್ಬರ ಅಪಕರ್ಷ ಬಹಳ ಉದ್ಯೋಗದಲ್ಲಿ ಉತ್ತಮ ಪ್ರಗತಿ. ಆದರೆ ಪ್ರತಿಷ್ಠೆ ಕುಂದುತ್ತ ನಡೆದು ಲಾಭದಲ್ಲಿ ಆಯಾತ್ತ ಸಮಯದಕ್ಕೆ ಅಡ್ಡಿಯಾಗಿ ತೊಂದರೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವಿಪರೀತ ಪ್ರತಿಕೂಲ. ಮಿತ್ರತ್ವದಲ್ಲಿ ವಿರೋಧ. ಪ್ರವಾಸ ಉತ್ತಮ. ಭೆಟ್ಟಿ ಮತ್ತು ಪತ್ರವ್ಯವಹಾರ ತೊಂದರೆಯದು. ಮಘಾದ ಕೊನೆಯ ೨ ಮತ್ತು ಪೂರ್ವಾದ ಮೊದಲಿನ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೬, ೧೭, ೧೮, ೧೯ ಅನುಕೂಲ.

### ಕನ್ಯಾ

ನಿಮ್ಮ ಪ್ರಕೃತಿ ಅನುಕೂಲ. ಆದರೆ ಹೆಂಡತಿಗೆ ಕಿಂಚಿತ್ ಕ್ಲೇಶ. ಉದ್ಯೋಗದಲ್ಲಿ ಲಾಭ ತುಂಬ. ಆದರೆ ಪ್ರತಿಷ್ಠೆ ಮತ್ತು ಪ್ರಗತಿ ಬಗ್ಗೆ ಹುರಹುರಿಯುಂಟಾಗು ವಂಥ ಕೆಲ ಮಾತು. ಪ್ರವಾಸ ತೊಂದರೆಯದು. ಪತ್ರವ್ಯವಹಾರ ಅನುಕೂಲ. ಆದರೆ ಭೆಟ್ಟಿ ತೊಂದರೆಯದು. ಪ್ರಾಪಂಚಿಕ ವಿಷಯಗಳಲ್ಲಿ ಸ್ವಲ್ಪ ಸುಖ. ಆದರೆ ಕೆಲ ಉದ್ವೇಗಕರ ಮಾತುಗಳು ಅಷ್ಟೇ ಪ್ರಮಾಣದಲ್ಲಿ ಉತ್ತರಾದ ಕೊನೆಯ ೨ ಮತ್ತು ಹಸ್ತಾದ ಮೊದಲನೆ ೨ ಚರಣಗಳಿಗೆ ಹೆಚ್ಚು ತೊಂದರೆ. ತಾ. ೧೬, ೧೭, ೧೮, ೧೯ ಅನುಕೂಲ.

### ತುಲಾ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೂ ಪ್ರಾಪಂಚಿಕ ತೊಂದರೆ ಬಹಳ ವಿಷಯಗಳಲ್ಲಿ ಉದ್ಯೋಗದಲ್ಲಿ ಲಾಭ. ಉತ್ತಮ ಆದರೆ ಪ್ರಗತಿ ಮತ್ತು ಪ್ರತಿಷ್ಠೆ ಕಡಮೆಯೆ ಮಿತ್ರಸುಖ ಉತ್ತಮ. ಮನರಂಜನೆಯ ಯೋಗ. ಅನೇಕ ಸಲ ಸ್ವಪ್ನಗಳು ಚಮತ್ಕಾರಿಕವಾಗಿ ಬೀಳುವವು. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಸ್ವಲ್ಪ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಸ್ವಾತಿಯ ಕೊನೆಯ ೨ ಮತ್ತು ವಿಶಾಖಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೮, ೧೯, ೨೧, ಅನುಕೂಲ.

### ವೃಶ್ಚಿಕ

ಪ್ರಕೃತಿ ಅನುಕೂಲ. ಹೆಂಡತಿಗೂಡ ಮತೈಕ್ಯ. ಆದರೆ ಕೆಲವೊಂದು ಅನಪೇಕ್ಷಿತ ಕಾರಣದಿಂದ ಸಹವಾಸ ಸುಖ ಕಡಮೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ವೆಚ್ಚವೂ ಇಮ್ಮಡಿ. ಮಹತ್ವದ ಕೆಲಸಗಳ ಸಂಬಂಧದಲ್ಲಿ ವಿಸ್ಮೃತಿ. ಬೀಳುವದರಿಂದ ಗೊಂದಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿನ್ನೆಡುವದು. ಪ್ರವಾಸಾದಿ ಕೆಲಸ ಹಿತಕರ. ಅನುರಾಧೆಯ ಕೊನೆಯ ೨ ಮತ್ತು ಜೇಷ್ಠಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದ ಯಶಸ್ಸು. ತಾ. ೧೬, ೧೭, ೨೧, ೨೨, ಅನುಕೂಲ.

### ಧನು

ಪ್ರಕೃತಿ ನಿಮ್ಮದು ಉತ್ತಮ. ಆದರೆ ಹೆಂಡತಿಯದು ಬಹಳ ಕೆಡುವದು. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ಪ್ರತಿಷ್ಠೆ ಕಡಮೆ ಪ್ರಾಪಂಚಿಕ ವಿಷಯಗಳಲ್ಲಿ ಸಾಧಾರಣ ತೊಂದರೆಯೆ. ಪೂಜ್ಯ ಮತ್ತು ಅಪೂಜ್ಯ ವ್ಯಕ್ತಿಗಳ ಸಹವಾಸ ಒಂದೇ ಕಾಲಕ್ಕೆ. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ನಿಮ್ಮದೆ ವಿಪರೀತ ಬುದ್ಧಿ ಅಡ್ಡ ಬರುವದರಿಂದ ಹೊಸ ಹೊಸ ಅಡಚಣಿಗಳು. ಸ್ಥಾವರದಲ್ಲಿ ಸ್ವಲ್ಪ ಹೆಚ್ಚಳ. ಭೆಟ್ಟಿ ಮತ್ತು ಪತ್ರವ್ಯವಹಾರಕ್ಕಿಂತ ಪ್ರವಾಸ ಹಿತಕರ. ಮೂಲಾದ ಕೊನೆಯ ೨ ಮತ್ತು ಪೂರ್ವಾಷಾಢಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೮, ೧೯, ೨೦, ಅನುಕೂಲ.

### ಮಕರ

ಪ್ರಕೃತಿ ಉತ್ತಮ. ಸ್ತ್ರೀಸುಖ ಅನುಕೂಲ. ಆದರೆ ಉಳಿದ ಬಹುತರ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ವಿಪರೀತ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮ. ಆದರೆ ಲಾಭ ಕಡಮೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸಿಕ್ಕುವ ಅನುಕೂಲತೆ ಇಲ್ಲವೆ ದೊರೆಯುವ ಯಶಸ್ಸು ಇದೆಲ್ಲ ತೊಂದರೆಯ ದೃಷ್ಟಿಯಿಂದ ಬಹಳ ವೆಚ್ಚದ್ದೆನಿಸುವದು. ಪ್ರವಾಸಾದಿ ಕೆಲಸ ಹಿತಕರ. ಉತ್ತರಾಷಾಢಾದ ಕೊನೆಯ ೨ ಶ್ರಾವಣದ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೬, ೧೭, ೨೧, ೨೨, ಅನುಕೂಲ.

### ಕುಂಭ

ನಿಮ್ಮ ಆರೋಗ್ಯ ಸಾಧಾರಣವೆ. ಆದರೆ ಹೆಂಡತಿಯದು ಉತ್ತಮ. ಅದರಂತೆ ಪ್ರಾಪಂಚಿಕ ಸುಖ ಮತ್ತು ಸ್ತ್ರೀ ಸುಖ ಉತ್ತಮ ಉದ್ಯೋಗದಲ್ಲಿ ಒಳ್ಳೆ ಪ್ರಗತಿ. ಉತ್ತಮ ಲಾಭ. ಮತ್ತು ಅಸಾಮಾನ್ಯ ಪ್ರತಿಷ್ಠೆ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಸ್ಥಾವರ ಜಂಗಮ ಸಂಗ್ರಹದಲ್ಲಿ ಬೆಳವಣಿಗೆಯಾಗುವ ಘಟನೆಗಳು. ಮಿತ್ರಸುಖ ಉತ್ತಮ. ಪ್ರವಾಸಾದಿ ಕೆಲಸ ಹಿತಕರ. ಶತತಾರಿಕೆಯ ಕೊನೆಯ ೨ ಮತ್ತು ಪೂರ್ವಾಭಾದ್ರಪದದ ಮೊದಲನೆ ೨ ಚರಣಗಳಿಗೆ ವಿಶೇಷ ಅನುಕೂಲ. ತಾ. ೧೮, ೧೯, ೨೦, ೨೧ ಅನುಕೂಲ.

### ಮೀನ

ಪ್ರಕೃತಿ ಒಟ್ಟಿಗೆ ಅನುಕೂಲ. ಆದರೆ ಪ್ರಾಪಂಚಿಕ ಸುಖ ಎಲ್ಲ ವಿಷಯಗಳಲ್ಲಿ ಉತ್ತಮ. ಪ್ರಿಯ ಜನರ ಸಹವಾಸ ಸ್ವತಃಕ್ಕೆ ಅನುಕೂಲ. ಮತ್ತು ಪ್ರತಿಕೂಲವಿರುವ ವ್ಯಕ್ತಿಗಳು ಒಂದೇ ಕಾರಣದಿಂದ ಒಕ್ಕಟ್ಟಿಗೆ ಭೆಟ್ಟಿಯಾಗುವ ಯೋಗ. ಉದ್ಯೋಗದಲ್ಲಿ ಉತ್ತಮ ಪ್ರಗತಿ. ಒಳ್ಳೇ ಪ್ರತಿಷ್ಠೆ ಮತ್ತು ತುಂಬ ಲಾಭ, ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಅವಚಿತ ಲಾಭದ ಸಂಭವ. ಉತ್ತಮ ಸ್ವಪ್ನಗಳು ಮಿತ್ರಸುಖ ಉತ್ತಮ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಉತ್ತರಾಭಾದ್ರಪದದ ಕೊನೆಯ ೨ ಮತ್ತು ರೇವತಿಯ ಮೊದಲನ ೨ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೧೬, ೧೭, ೨೧, ೨೨ ಅನುಕೂಲ.

## ಈ ಸಮಿತಿ ಅಮರ ರಾಜ್ಯಘಟನೆ ರಚಿಸಲಿ

(೧ ನೇ ಪುಟದಿಂದ)

ದರೆ ಮತ್ತು ಜನತೆಯ ವಿಶ್ವಾಸದ್ರೋಹವನ್ನು ಮಾಡಲೋಸುಗ ಅವರನ್ನೇ ಹೊಗಳುವಂತಹ ಹೊಲ್ಲನಡೆಯವರನ್ನು ಮೆಚ್ಚಿ ಉಡುಗರೆ ಕೊಟ್ಟರೆ ಪ್ರಜಾರಾಜ್ಯಗಳು ಕುಸಿದು ಬೀಳುವವು."

ಮಾನವಕೃತಿಯು ಅಮರತ್ವವನ್ನು ಆಶಿಸಬಲ್ಲುದಾದರೆ ನೀವು ಯೋಜಿಸುವ ರಾಜ್ಯಘಟನೆಯು ಆ 'ಅಮರತ್ವ'ಕ್ಕಾಗಿಯೇ ರಕ್ಷಿಸಲ್ಪಡಲೆಂದೇ ನನ್ನ ಪ್ರಾರ್ಥನೆ. ಮತ್ತು ವಿಧ್ವಂಸಕ ಶಕ್ತಿಗಳನ್ನೆಲ್ಲ ಬಗ್ಗುಬಡಿದು ಬದುಕಬಲ್ಲ 'ವಜ್ರದೇಹ'ದ ಘಟನೆಯದಾಗಲೆಂದೂ ನಾನು ಬಯಸುತ್ತೇನೆ.

### ನಮ್ಮಲ್ಲಿಯ ಅಂಶಗಳು

ಇನ್ನು ನಾನು ನಮ್ಮ ದೇಶದಲ್ಲಿ ಈ ಪ್ರಶ್ನೆಗೆ ಸಂಬಂಧಿಸಿದ ಕೆಲವು ಅಂಶಗಳ ಕಡೆಗೆ ಹೊರಳುವದು ಲಾಭದಾಯಕವಾಗುವದು. ನಮ್ಮಲ್ಲಿ ಘಟನಾಸಮಿತಿಯ ಬಗ್ಗೆ ನಿಶ್ಚಿತವಾದ ಮೊದಲನೆ ಉಲ್ಲೇಖ (ಆ ವಿಶಿಷ್ಟ ಹೆಸರಿನಲ್ಲಿ ಅಲ್ಲದಿದ್ದರೂ) ವು ೧೯೨೨ ರಲ್ಲಿ ಮಹಾತ್ಮರು ಕೊಟ್ಟ ಹೇಳಿಕೆಯಲ್ಲಿ ಕಂಡು ಬರುವದು. "ಸ್ವರಾಜ್ಯವು ಬ್ರಿಟಿಶ ಪಾರ್ಲಮೆಂಟಿನಿಂದ ದೊರೆಯುವ ಕಾಣಿಕೆಯಾಗಿಲ್ಲ ಹಿಂದೀಯರೇ ಅದನ್ನು ಘೋಷಿಸಿ ಪಾರ್ಲಮೆಂಟಿನ ಸಮ್ಮತಿ ಪಡೆದುಕೊಳ್ಳತಕ್ಕದ್ದಿರುವದು. ಹಿಂದೀ ಜನರ ಘೋಷಣೆಯನ್ನು ಅದು ಒಪ್ಪಂದದಲ್ಲಿ ಭಾಗಿಯಾಗಿ ದೃಢಪಡಿಸುವದು. ಹಿಂದಿ ಲೋಕಸಿಯುಕ್ತರ ಮುಖಾಂತರ ಹಿಂದೀಯರು ತಮ್ಮ ಈ ಇಚ್ಛೆ ವ್ಯಕ್ತಪಡಿಸಬೇಕಾಗುವದು" ಎಂದು ಅವರು ಅದರಲ್ಲಿ ಹೇಳಿರುವರು. ಸ್ವತಂತ್ರವಾಗಿ ಆರಿಸಲ್ಪಟ್ಟ ಪ್ರತಿನಿಧಿಗಳಿಂದ ಕೂಡಿದ ಘಟನಾ ಸಮಿತಿಯ ಬಗ್ಗೆ ಮಹಾತ್ಮರು ಮುಂಡಿಸುತ್ತ ಬಂದ ಈ ಬೇಡಿಕೆಯು ಆಗಾಗ್ಗೆ ಬೇರೆ ಬೇರೆ ಸಾರ್ವಜನಿಕ ಸಂಸ್ಥೆ ಹಾಗು ರಾಜಕೀಯ ಧುರೀಣರಿಂದ ದೃಢಪಡಿಸಲ್ಪಟ್ಟಿರುವದು. ೧೯೩೪ ರಲ್ಲಿ ರಾಂಚಿಯಲ್ಲಿ ಸ್ಥಾಪಿತವಾದ ಸ್ವರಾಜ್ಯ ಪಕ್ಷವು ಒಂದು ಯೋಜನೆ ಸಿದ್ಧಪಡಿಸಿ ಅದರಲ್ಲಿ ಈ ಕೆಳಗಿನ ಠರಾವು ಸೇರಿಸಿತು. "ಈ ಪರಿಷತ್ತು ಹಿಂದುಸ್ತಾನಕ್ಕೆ ಸ್ವಯಂ ನಿರ್ಣಯದ ಅಧಿಕಾರವನ್ನು ಬೇಡುತ್ತದೆ. ಹಾಗು ಗ್ರಾಹ್ಯವಾದ ಘಟನೆಯನ್ನು ಸಿದ್ಧಪಡಿಸಲು ಹಿಂದಿ ಜನರ ಎಲ್ಲ ವರ್ಗಗಳ ಪ್ರತಿನಿಧಿಗಳ ಘಟನಾ ಸಮಿತಿಯನ್ನು ಕರೆಯುವದೊಂದೇ ಆ ತತ್ವವನ್ನು ಅನ್ವಯಿಸುವ ಪದ್ಧತಿಯೆಂದು ಸಾರುತ್ತದೆ." ಈ ಗೊತ್ತುವಳಿಯಲ್ಲಿ ಅಡಕವಾದ ಧೋರಣವನ್ನು ೧೯೩೪ ಮೇದಲ್ಲಿ ಪಾಟಣಾದಲ್ಲಿ ಕೂಡಿದ ಎ. ಆಯ್. ಸಿ. ಸಿ ಯು ಮಾನ್ಯ ಮಾಡಿತು. ಮತ್ತು ಈ ರೀತಿ ಹಿಂದಿ ಘಟನೆಯನ್ನು ಸಿದ್ಧಪಡಿಸಲು ಘಟನಾ ಸಮಿತಿಯ ಯೋಜನೆಯು ಹಿಂದಿ ರಾಷ್ಟ್ರೀಯ ಸಭೆಯಿಂದ ಮಾನ್ಯ ಮಾಡಲ್ಪಟ್ಟಿತು.

೧೯೩೬ ಡಿಸೆಂಬರದಲ್ಲಿ ಕೂಡಿದ ಕಾಂಗ್ರೆಸ ಅಧಿವೇಶನದಲ್ಲಿ ಮೇಲಿನ ಗೊತ್ತುವಳಿ ದೃಢಪಡಿಸಲ್ಪಟ್ಟಿತು. "ಇಡೀ ಜನತೆಗೆ ರಾಜಕೀಯ ಅಧಿಕಾರ ವರ್ಗಾಯಿಸಿ ಸರಕಾರವು ಅದರ ಪರಿಣಾಮಕರ ನಿಯಂತ್ರಣದಲ್ಲಿ ಉಳಿಯುವ ಚೊಕ್ಕ ಲೋಕಸತ್ತಾತ್ಮಕ ಸರಕಾರವೇ ಕಾಂಗ್ರೆಸ್ಸಿಗೆ ಬೇಕು. ದೇಶದ ಘಟನೆಯನ್ನು ಕೊನೆಯದಾಗಿ ನಿರ್ಣಯಿಸುವ ಅಧಿಕಾರವುಳ್ಳ ಘಟನಾ ಸಮಿತಿಯ ಮುಖಾಂತರವೇ ಈ ತರದ ಸರಕಾರವು ಅಸ್ತಿತ್ವದಲ್ಲಿ ಬರಬಲ್ಲದು" ಎಂದು ದೃಢಪಡಿಸಲಾದ ಗೊತ್ತುವಳಿಯಲ್ಲಿರುವದು. ೧೯೩೯ ನವೆಂಬರದಲ್ಲಿ ಕಾಂಗ್ರೆಸ ಕಾರ್ಯಕಾರಿ ಸಮಿತಿಯು ಒಂದು ಗೊತ್ತುವಳಿಯಿಂದ "ಹಿಂದುಸ್ತಾನದ ಸ್ವಾತಂತ್ರ್ಯವನ್ನೂ ದೇಶದ ಘಟನೆಯನ್ನೂ ಘಟನಾ ಸಮಿತಿಯ ಮುಖಾಂತರ ದೇಶದ ಜನರೇ ಸಿದ್ಧಪಡಿಸಿಕೊಳ್ಳಬೇಕೆಂಬದನ್ನು ಮಾನ್ಯ ಮಾಡುವದು ಅವಶ್ಯವಿರುವದು" ಎಂದು ಸಾರಿತು.

### ಮುಸ್ಲಿಂ ಲೀಗಿನ ಧೋರಣ

ಆದರೆ ಮುಸ್ಲಿಂ ಲೀಗು ೧೯೪೦ ಮಾರ್ಚದಲ್ಲಿ ಪಾಕಿಸ್ತಾನದ ಗೊತ್ತುವಳಿ ಸ್ವೀಕರಿಸುವ ವರೆಗೆ ಘಟನೆಯನ್ನು ಸಿದ್ಧಪಡಿಸಲು ಘಟನಾ ಸಮಿತಿಯು ಯೋಗ್ಯ ಪದ್ಧತಿಯಾಗಿರುವದೆಂದು ಅದನ್ನು ಎತ್ತಿ ಹಿಡಿದಿದ್ದಿಲ್ಲ. ಆ ಗೊತ್ತುವಳಿ ಸ್ವೀಕರಿಸಿದ ನಂತರ ಮುಸ್ಲಿಂ ಲೀಗಿನ ಧೋರಣವು ಘಟನಾ ಸಮಿತಿಯ ಯೋಜನೆಗೆ (ಪ್ರತ್ಯೇಕ ಮುಸಲ್ಮಾನ ರಾಷ್ಟ್ರಕ್ಕಾಗಿ ಬೇಡಿದ ಭಾಗಗಳಿಗಾಗಿ ಒಂದು ಹಾಗು ಉಳಿದ ಹಿಂದುಸ್ತಾನಕ್ಕಾಗಿ ಒಂದು) ಅನುಕೂಲದ್ದಾಗಿ ಪರಿಣಮಿಸಿದ್ದುದು ತೋರುತ್ತದೆ. ಹೀಗೆ ೧೯೪೦ ರಲ್ಲಿ ಎರಡೂ ಪ್ರಮುಖ ರಾಜಕೀಯ ಪಕ್ಷಗಳು ಘಟನೆಯನ್ನು ರಚಿಸಲು ಘಟನಾ ಸಮಿತಿಯೊಂದೇ ನೇರವಾದ ಮಾರ್ಗವೆಂದು ಒಪ್ಪಿಕೊಂಡವು. ಆದರೆ ಎರಡೂ ಪಕ್ಷಗಳಲ್ಲಿ ಒಂದು ವ್ಯತ್ಯಾಸ ಉಂಟಾಯಿತು. ಕಾಂಗ್ರೆಸ್ಸು ಇಡೀ ಹಿಂದುಸ್ತಾನಕ್ಕೆ ಒಂದೇ ಘಟನಾಸಮಿತಿ ಇರಬೇಕೆಂದು ಬೇಡಿದರೆ, ಮುಸ್ಲಿಂ ಲೀಗು ತನ್ನ ಬೇಡಿಕೆಗನುಸಾರವಾಗಿ ಎರಡು ಪ್ರತ್ಯೇಕ ರಾಷ್ಟ್ರಗಳಿಗೆ ಎರಡು ಘಟನಾ ಸಮಿತಿಗಳಿರಬೇಕೆಂದು ಬೇಡಿತು. ಒಂದೇ ಇರಲಿ, ಎರಡೇ ಇರಲಿ, ಘಟನಾ ಸಮಿತಿಯ ವಿಚಾರವು ಆಗ ಜನರಲ್ಲಿ ಸ್ಪಷ್ಟವಾಗಿ ಒಡಮೂಡಿತ್ತು. ಸಪ್ರೂ ಸಮಿತಿಯವರೂ ೧೯೪೫ ನೇ ಇಸ್ವಿಯಲ್ಲಿ ತಾವು ಹೊರಡಿಸಿದ ವರದಿಯಲ್ಲಿ ಘಟನಾ ಸಮಿತಿಯ ವಿಚಾರವನ್ನು ಮಾನ್ಯ ಮಾಡಿ ಒಂದು ನಿಶ್ಚಿತ ಯೋಜನೆ ರೂಪಗೊಳಿಸಿದರು.

### ನಮ್ಮ ಕರ್ತವ್ಯ

ಆದರೆ ನಾವೀಗ ಈ ಘಟನಾ ಸಮಿತಿಯಲ್ಲಿ ಬ್ರಿಟಿಶ ಮಂತ್ರಿಮಂಡಳ ಶಿಷ್ಟರು ಸಿದ್ಧಪಡಿಸಿದ ಯೋಜನೆಯನ್ವಯ ಕೂಡಿರುವೆವು. ಕಾಂಗ್ರೆಸ್ಸು ಲೀಗು ಹಾಗು ಇತರ ರಾಜಕೀಯ ಸಂಸ್ಥೆಗಳು ಈ ವಿಷಯದಲ್ಲಿ ಮಾಡಿದ ಸೂಚನೆಗಳಿಗೂ ಈ ಯೋಜನೆಗೂ ವ್ಯತ್ಯಾಸವಿದ್ದರೂ ಅನೇಕ ರಾಜಕೀಯ ಪಕ್ಷಗಳು ಹಾಗೂ ಯಾವದೇ ರಾಜಕೀಯ ಪಕ್ಷಕ್ಕೆ ಹೊಂದದ ಅನೇಕ ರಾಜಕೀಯ ಜನರು ಅದನ್ನು ಮಾನ್ಯ ಮಾಡಿರದಿದ್ದರೂ ರಾಜಕೀಯ ಬಿಕ್ಕಟ್ಟು ಕೊನೆಗಾಣಿಸಲು ಪ್ರಯೋಗದಲ್ಲಿ ತಂದು ನೋಡುವಂತಹದಾಗಿದೆಂದು ಬ್ರಿಟಿಶ ಮಂತ್ರಿಮಂಡಳ ಶಿಷ್ಟಮಂಡಳದವರು ಅದನ್ನು ಯೋಜಿಸಿದ್ದಾರೆ. ನಾನು ಇಲ್ಲಿ ಅವರ ಯೋಜನೆಯ ಗುಣಾವಗುಣ ಚರ್ಚಿಸಲು ಹೋಗುವದಿಲ್ಲ. ಮಹಾ ರಾಜಕೀಯ ಮುತ್ಸದ್ದಿಗಳು ಹೋಗಲು ಅಂಜುವಲ್ಲಿ ನಾನು ಹೋಗಬಯಸುವದಿಲ್ಲ.

ಹಿಂದುಸ್ತಾನದ ಇತಿಹಾಸದಲ್ಲಿಯೇ ಇದು ಅಪೂರ್ವ ಹಾಗು ಸಂಸ್ಮರಣೀಯವಾದ ಘಟನೆಯಾಗಿದೆ. ನಿಮ್ಮ ಪರಿಶ್ರಮವು ಫಲಿಸಲೆಂದು ಹಾರೈಸುತ್ತೇನೆ. ಮತ್ತು ನಿಮ್ಮ ಕಾರ್ಯಕಲಾಪಗಳು ವಿವೇಕ, ಸಾರ್ವಜನಿಕ ಭಾವನೆ, ಜಾಣತನ, ತಾಳ್ಮೆ, ನ್ಯಾಯ ಹಾಗು ನಿಷ್ಪಕ್ಷಪಾತದಿಂದ ನಡೆಯಲೆಂದೂ ಹಿಂದುಸ್ತಾನವು ಪುನ: ಹಿಂದಿನ ವೈಭವ ಪಡೆದು ಜಗತ್ತಿನ ಶ್ರೇಷ್ಠ ರಾಷ್ಟ್ರಗಳಲ್ಲಿ ಸಮಾನ ದರ್ಜೆಯಿಂದ ವಿರಾಜಮಾನವಾಗುವಂತೆ ದೂರದೃಷ್ಟಿಯಿಂದ ಸಾಗಲೆಂದೂ ದೇವರ ಆಶೀರ್ವಾದ ಕೋರುವೆ.



ನಾನು ವಿಶೇಷತಃ ನಿಮಗೆ ಉದಾರ ಹಾಗು ಸಮನ್ವಯದ ದೃಷ್ಟಿಯಿಂದ ಸಾಗಲು ಕೇಳಿಕೊಳ್ಳುತ್ತೇನೆ. "ದೂರದೃಷ್ಟಿಯಿಲ್ಲದ ಜನರು ಹಾಳಾಗುವದು ಖಂಡಿತ" ಎಂದು ಬಾಯಬಲಿನಲ್ಲಿ ಹೇಳಿದ್ದುದು ಯಥಾರ್ಥವಾಗಿದೆ.

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು